# ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ : ರಾಜಕೀಯ ವೈಫಲ್ಯದ ಒಂದು ಸಂಕಥನ

ಡಾ. ಟಿ.ಆರ್. ಚಂದ್ರಶೇಖರ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

GRAMEENA ABHIVRIDHI MATTU VIKENDRIKARANA :
RAJAKIYA VAIPALYADA ONDU SANKATHANA
by

**Dr. T.R.Chandrasekhara**
Professor, Dept. of Development Studies
Kannada University, Hampi
Vidyaranya 583 276

***Published by***
**Dr. H.C.Boralingaiah**
Director, Prasaranga
Kannada University, Hampi
Vidyaranya 583 276

Pp : viii+70 **Price : Rs.40/-**

First Impression: 2004
www.kavihampi.org



*ಪ್ರಕಾಶಕರು*
**ಡಾ. ಹಿ. ಚಿ. ಬೋರಲಿಂಗಯ್ಯ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬೆಲೆ : ರೂ. ೪೦/-

ಮುಖಪುಟ : ಕೆ.ಕೆ. ಮಕಾಳಿ

*ಅಕ್ಷರ ಸಂಯೋಜನೆ*
ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್
ಕಮಲಾಪುರ

*ಮುದ್ರಣ*
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ



## ಬಯಲನು ತುಂಬುವ
## ಆಲಯದ ಬೆಳಕಿನ ಬೀಜಗಳು

ಕನ್ನಡ ವಿಶ್ವವಿದ್ಯಾಲಯ ಕನ್ನಡ ಸಂಸ್ಕೃತಿಯ ಬಹುತ್ವದ ನೆಲೆಗಳನ್ನು ಹುಡುಕುವ, ಗಟ್ಟಿಗೊಳಿಸುವ, ಹರಡುವ ಕಾಯಕವನ್ನು ನೋಂಪಿಯಂತೆ ನಡೆಸಿಕೊಂಡು ಬಂದಿದೆ. ಕನ್ನಡ ಸಂಸ್ಕೃತಿಯನ್ನು ಮತ್ತೆ ಮತ್ತೆ ನಿರ್ವಚನ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಕನ್ನಡ ವಿಶ್ವವಿದ್ಯಾಲಯವು ಒಂದು ಆಡುಂಬೊಲವಾಗಿ ಕಾರ್ಯ ನಿರ್ವಹಿಸುತ್ತಿದೆ. ನಮಗೆ ಗೊತ್ತಿರುವ ಸಂಸ್ಕೃತಿಯ ಅರ್ಥಗಳ ಆಚೆಗೆ ಅನೂಹ್ಯ ಲೋಕಗಳ ಕಡೆಗೆ ತನ್ನನ್ನು ಮತ್ತು ಕನ್ನಡಿಗರನ್ನು ಒಯ್ಯುವ ಪಯಣದ ದಾರಿಗಳನ್ನು ರೂಪಿಸುವ ಮಹತ್ವದ ಸಾಹಸದ ಹೆಜ್ಜೆಗಳು ಮೂಡಿಬಂದಿವೆ. ಇದು ನಿರಂತರ ನಡೆಯಬೇಕಾದ ಬಹುದಾರಿಗಳ ಮಹಾಯಾನ.

ಇಪ್ಪತ್ತೊಂದನೆಯ ಶತಮಾನದ ಆರಂಭದಲ್ಲಿ ಜಾಗತೀಕರಣದ ಈ ಸಂಕ್ರಮಣ ಸ್ಥಿತಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ರಚನೆ ಮತ್ತು ಕಾರ್ಯಗಳು ಸವಾಲಿನವು ಮತ್ತು ಜವಾಬ್ದಾರಿಯವೂ ಆಗಿವೆ. 'ಕನ್ನಡ' ಎನ್ನುವ ಪರಿಕಲ್ಪನೆಯನ್ನು ಭಾಷೆ, ಸಾಹಿತ್ಯ, ಬದುಕು ಮತ್ತು ಅದರ ಆಧುನಿಕ ಸನ್ನಿವೇಶಗಳಲ್ಲಿ ಅರ್ಥೈಸುವ ಮತ್ತೆ ಕಟ್ಟುವ ಕೆಲಸವನ್ನು ಕನ್ನಡ ವಿಶ್ವವಿದ್ಯಾಲಯ ಒಂದು ಕಾಯಕದಂತೆ ಕೈಗೆತ್ತಿಕೊಂಡಿದೆ. ಕನ್ನಡ ಮತ್ತು ಅಭಿವೃದ್ಧಿ ಎನ್ನುವ ಎರಡು ಪರಿಕಲ್ಪನೆಗಳು ಎದುರುಬದುರಾಗುವ ಆತಂಕ ಒಂದು ಕಡೆಯಾದರೆ, ಅವು ಒಂದನ್ನೊಂದು ಪ್ರಭಾವಿಸಿ ನೆರವಾಗುವ ಆವರಣವನ್ನು ನಿರ್ಮಾಣ ಮಾಡುವುದು ಇನ್ನೊಂದೆಡೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯವು ಈ ಸಂಬಂಧಿಯಾದ ಹೊಸ ಆಲೋಚನೆಗಳ ಸಂವಾದ ಮತ್ತು ಅದರ ಆನ್ವಯಿಕ ಸಾಧನೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಬಯಸಿದೆ.

ಮಾಹಿತಿ ತಂತ್ರಜ್ಞಾನವು ಜಾಗತೀಕರಣದ ಪ್ರಮುಖ ಅಸ್ತ್ರವಾಗಿ ಪ್ರಯೋಗವಾಗುತ್ತಿರುವಾಗ ಈ ಅಸ್ತ್ರವನ್ನು ಕನ್ನಡದ ಅಭಿವೃದ್ಧಿಗಾಗಿ ಬಳಸುವ ಹೊಣೆಗಾರಿಕೆಯು ಕನ್ನಡ ವಿಶ್ವವಿದ್ಯಾಲಯದ ಮೇಲೆ ಇದೆ. ಕನ್ನಡ ತಂತ್ರಾಂಶಗಳ ಅಭಿವೃದ್ಧಿಯ ಎಲ್ಲಾ ತೊಡಕುಗಳನ್ನು ನಿವಾರಿಸಿಕೊಂಡು ಮುಂದೆ ಸಾಗಬೇಕೆನ್ನುವ ಉದ್ದೇಶದಿಂದ ಕನ್ನಡ ವಿಶ್ವವಿದ್ಯಾಲಯ ಈ ಸಂಬಂಧ ಸಾಹಿತಿಗಳ, ಭಾಷಾತಜ್ಞರ, ತಂತ್ರಜ್ಞರ ಸಮಾಲೋಚನೆ ಯನ್ನು ನಡೆಸಿ ಕನ್ನಡವು ಸರ್ವವ್ಯಾಪಿಯಾಗಿ ಬೆಳೆಯಲು ಶ್ರಮಿಸುತ್ತಿದೆ.

ಕನ್ನಡವು ಕಾಗದರಹಿತ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತಿರುವಾಗಲೂ ಪುಸ್ತಕ ರೂಪದಲ್ಲಿ ಕನ್ನಡ ಕೃತಿಗಳ ಪ್ರಕಟಣೆ ಸಮಾನಾಂತರವಾಗಿ ಕ್ರಿಯಾಶೀಲವಾಗಿ ನಡೆಯುವುದು ಬಹಳ ಮುಖ್ಯವಾದದ್ದು. ತಾಂತ್ರಿಕ-ಮೌಖಿಕ ಮಾಧ್ಯಮದಲ್ಲಿ ಕನ್ನಡವು ಬಳಕೆಯಾಗುತ್ತಿರುವಾಗಲೇ ಕಾಗದದಲ್ಲಿ ಕನ್ನಡ ಅಕ್ಷರಗಳು ಮುದ್ರಣಗೊಂಡು ಕಣ್ಣಿಗೆ, ಕಿವಿಗೆ ಮತ್ತು ಮನಸ್ಸಿಗೆ ಕನ್ನಡವನ್ನು ಸಂವಹನಗೊಳಿಸುವ ಪ್ರಕ್ರಿಯೆ ನಿರಂತರವಾಗಿ ನಡೆಯಬೇಕಿದೆ. ಇಲ್ಲಿ ಪ್ರಕಟಗೊಳ್ಳುವ ಮಾಧ್ಯಮದೊಂದಿಗೆ ಅಭಿವ್ಯಕ್ತಗೊಳ್ಳುವ ಚಿಂತನಾ ಶರೀರವೂ ಮುಖ್ಯವಾದದ್ದು. ಭಾಷೆ, ಸಾಹಿತ್ಯ, ಕಲೆಗಳು, ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ ಎನ್ನುವ ಬೌದ್ಧಿಕ ಗಡಿ ರೇಖೆಗಳನ್ನು ಕಳಚಿಕೊಂಡು ಕನ್ನಡ ಜ್ಞಾನವು ಕನ್ನಡ ವಿಶ್ವವಿದ್ಯಾಲಯದಲ್ಲಿ ರೂಪುಗೊಳ್ಳುವ ಮತ್ತು ಪ್ರಕಟಗೊಳ್ಳುವ ಪ್ರಕ್ರಿಯೆ ನಡೆಯುತ್ತಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಇಂಥ ಪ್ರಕ್ರಿಯೆಯ ಅನಂತರೂಪಗಳನ್ನು ಸಾಕಾರಗೊಳಿಸುವ ಒಂದು ನವರಂಗ. ಈ ಪ್ರಕಟಣೆಗಳು ಚಿಂತನೆ ಮತ್ತು ಪ್ರಯೋಗಗಳ ಫಲಗಳಾಗಿರುವುದರ ಜೊತೆಗೆ ಕರ್ನಾಟಕವನ್ನು ಮತ್ತು ಕನ್ನಡ ಸಂಸ್ಕೃತಿಯನ್ನು ಇಪ್ಪತ್ತೊಂದನೇ ಶತಮಾನದುದ್ದಕ್ಕೂ ಮುನ್ನಡೆಸುವ ಬೆಳಕಿನ ಬೀಜಗಳಾಗಿವೆ. ಈ ಆಶಯದ ಹಿನ್ನೆಲೆಯಲ್ಲಿ ರೂಪುಗೊಂಡ ಪ್ರಸ್ತುತ ಕೃತಿ 'ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ: ರಾಜಕೀಯ ವೈಫಲ್ಯದ ಒಂದು ಸಂಕಥನ'. ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳನ್ನು ರಾಜಕೀಯ ವೈಫಲ್ಯದ ಸಂಕಥನವಾಗಿ ಪ್ರಸ್ತುತ ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿ ಹಾಗೂ ಪಡೆದ ಅನುಭವಗಳ ಆಧಾರದ ಮೇಲೆ ಇಲ್ಲಿನ ಅಧ್ಯಯನವನ್ನು ಕಟ್ಟಲಾಗಿದೆ. ಸೈದ್ಧಾಂತಿಕತೆ ಹಾಗೂ ಪ್ರಾಯೋಗಿಕತೆಗಳನ್ನು ಸಮನ್ವಯಗೊಳಿಸಿ ಇಲ್ಲಿನ ಪ್ರಮೇಯವನ್ನು ರೂಪಿಸಲಾಗಿದೆ. ಇಂತಹ ಕೃತಿಯನ್ನು ರಚಿಸಿಕೊಟ್ಟ ಡಾ.ಟಿ.ಆರ್.ಚಂದ್ರಶೇಖರ ಅವರಿಗೆ ನಮ್ಮ ಅಭಿನಂದನೆಗಳು.

ಬಿ.ಎ. ವಿವೇಕ ರೈ
ಕುಲಪತಿ

# ಮುನ್ನುಡಿ

ಕನ್ನಡ ವಿಶ್ವವಿದ್ಯಾಲಯದಲ್ಲಿನ ಅಭಿವೃದ್ಧಿ ಅಧ್ಯಯನ ವಿಭಾಗವು ಕಳೆದ ೭-೮ ವರ್ಷಗಳಿಂದ ವಿಕೇಂದ್ರೀಕರಣ ಹಾಗೂ ಪಂಚಾಯತ್‌ರಾಜ್ ವ್ಯವಸ್ಥೆ ಕುರಿತಂತೆ ಅಧ್ಯಯನಗಳನ್ನು ನಡೆಸಿಕೊಂಡು ಬಂದಿದೆ. ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಕೃಷ್ಣನಗರ ಗ್ರಾಮಪಂಚಾಯತಿ ಹಾಗೂ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಯರೆಹಂಚನಾಳ ಗ್ರಾಮಪಂಚಾಯತಿಗಳಿಗೆ ಜನರ ಸಹಭಾಗಿತ್ವ ವಿಧಾನದಲ್ಲಿ ಅಭಿವೃದ್ಧಿ ಯೋಜನೆ ರೂಪಿಸಿಕೊಡುವ ಕಾರ್ಯವನ್ನು ನಮ್ಮ ವಿಭಾಗ ಮಾಡಿದೆ. ಅಧ್ಯಯನ, ಮೌಲ್ಯಮಾಪನ, ಸಂದರ್ಶನ ಮುಂತಾದ ಕಾರಣಗಳಿಗಾಗಿ ಹೈದರಾಬಾದ್- ಕರ್ನಾಟಕ ಪ್ರದೇಶದ ಅನೇಕ ಗ್ರಾಮಗಳನ್ನು ನಾವು ಭೇಟಿ ಮಾಡಿದ್ದೇವೆ. ಈ ಎಲ್ಲ ಅನುಭವಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕಟ್ಟಲಾಗಿದೆ. ಈ ಅಧ್ಯಯನಕ್ಕೆ ನಾವು ವಿಶೇಷವಾದ ಅಧ್ಯಯನ ವಿಧಾನವನ್ನು ಅಳವಡಿಸಿಕೊಂಡಿದ್ದೇವೆ. ಅದನ್ನು 'ಅರ್ಥಗ್ರಹಣ ಪದ್ಧತಿ'ಯೆಂದು ಕರೆಯಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯ ಜೊತೆಯಲ್ಲಿ ಪಡೆದ ಅನುಭವವನ್ನು ಇಲ್ಲಿ ಆಕರವಾಗಿ ಬಳಸಲಾಗಿದೆ. ಸಮಾಜವಿಜ್ಞಾನಗಳಲ್ಲಿ ಕ್ವಚಿತ್ತಾಗಿ ಕಾಣುವ ಇಂತಹ ಅಧ್ಯಯನ ವಿಧಾನವನ್ನು ಹೆಚ್ಚು ದಷ್ಟಪುಷ್ಟಗೊಳಿಸುವ ಅಗತ್ಯವಿದೆ. ಕೇವಲ ಅಂಕಿ ಅಂಶಗಳು ಹಾಗೂ ಸಮೀಕರಣಗಳೆ ಅಧ್ಯಯನವಾಗುವುದು ಸಾಧ್ಯವಿಲ್ಲ. ಈ ಕಾರಣದಿಂದ ಪ್ರಸ್ತುತ ಬರಹವನ್ನು ಅಧ್ಯಯನವೆನ್ನುವುದಕ್ಕಿಂತ ಅನುಸಂಧಾನವೆಂದು ಕರೆಯುವುದೆ ಸೂಕ್ತ. ನಮ್ಮ ಗ್ರಾಮೀಣ ಬದುಕನ್ನು ಕುರಿತಂತೆ ನಡೆಸಿದ ಅನುಸಂಧಾನ ಇದು. ನಮ್ಮ ಸಮಾಜದ ಸಂದರ್ಭದಲ್ಲಿ ಅನುಸಂಧಾನಕ್ಕೆ ವರ್ಣ, ಜಾತಿ, ಪ್ರದೇಶ ಮತ್ತು ಲಿಂಗ ಸಂಬಂಧಿ ಮಿತಿಗಳಿವೆ. ಇದರಿಂದಾಗಿಯೆ ನಮ್ಮಲ್ಲಿ ಪ್ರಜಾಪ್ರಭುತ್ವವು ಗಟ್ಟಿಯಾಗಿ ನೆಲೆಯೂರಲು ಇನ್ನೂ ಸಾಧ್ಯವಾಗಿಲ್ಲ. ಅನುಸಂಧಾನಾತ್ಮಕತೆಯು ನಮ್ಮ ಸಮಾಜದ ಗುಣವಲ್ಲ. ಇಂತಹ ಮಿತಿಗಳನ್ನು ಮೀರುವ ದಿಶೆಯಲ್ಲಿ ಇದೊಂದು ಸಣ್ಣ ಪ್ರಯತ್ನ.

ಪ್ರಸ್ತುತ ಅಧ್ಯಯನವು ಯಶಸ್ವಿಯಾಗಿ ಪೂರ್ಣಗೊಳ್ಳಲು ಅನೇಕರು ಅನೇಕ ಬಗೆಯಲ್ಲಿ ನೆರವಾಗಿದ್ದಾರೆ. ಮೊದಲನೆಯದಾಗಿ ನನ್ನ ವಿಚಾರ-ಬರಹಗಳ ಮೊದಲ ಓದುಗರು-ಕೇಳುಗರು ಆಗಿರುವ ಡಾ.ಬಿ.ಶೇಷಾದ್ರಿಗಳಿಗೆ, ಅವರ ಸಲಹೆ-ಸೂಚನೆಗಳಿಗೆ ನನ್ನ ಕೃತಜ್ಞತೆಗಳು ಸಲ್ಲಬೇಕು.

ವಿಭಾಗದ ಎಲ್ಲ ಸಹೋದ್ಯೋಗಿಗಳ ನೆರವನ್ನು ಇಲ್ಲಿ ಸ್ಮರಿಸಲು ಬಯಸುತ್ತೇನೆ. ಈ ಅಧ್ಯಯನ ಕೈಗೊಳ್ಳಲು ನೆರವು ನೀಡಿದ ಕನ್ನಡ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತಿಯ ಅಧಿಕಾರಿಗಳಿಗೆ, ನಾವು ಭೇಟಿ ಮಾಡಿದ ಎಲ್ಲ ಗ್ರಾಮ ಪಂಚಾಯತಿಗಳ ಚುನಾಯಿತ ಸದಸ್ಯರಿಗೆ, ಕಾರ್ಯದರ್ಶಿಗಳಿಗೆ ನಮ್ಮ ಕೃತಜ್ಞತೆಗಳು. ನಾವು ಕ್ಷೇತ್ರಕಾರ್ಯ ನಡೆಸಿದ ಗ್ರಾಮಗಳಲ್ಲಿ ಸಾರ್ವಜನಿಕರು ನೆರವು ನೀಡಿದ್ದಾರೆ.

ಅನೇಕ ಮೂಲಗಳಿಂದ ನಾನು ನನ್ನ ಅಧ್ಯಯನಕ್ಕೆ ವಿಚಾರ-ಮಾಹಿತಿಯನ್ನು ಬಳಸಿ ಕೊಂಡಿದ್ದೇನೆ. ಇಷ್ಟಾದರೂ ಇಲ್ಲಿನ ಎಲ್ಲ ಸೈದ್ಧಾಂತಿಕ ನಿಲುವಿಗೆ ಮತ್ತು ಲೋಪಗಳಿದ್ದರೆ ಅಂತಹ ಲೋಪಗಳಿಗೆ ನಾನು ಮಾತ್ರ ಹೊಣೆಗಾರ ಎಂಬುದನ್ನು ಹೇಳುವ ಅಗತ್ಯವಿಲ್ಲವೆಂದು ಭಾವಿಸಿದ್ದೇನೆ.

ಈ ಯೋಜನೆಯನ್ನು ಪುಸ್ತಕ ರೂಪದಲ್ಲಿ ಅಚ್ಚುಕಟ್ಟಾಗಿ ಪ್ರಕಟಿಸಿರುವ ಪ್ರಸಾರಾಂಗದ ನಿರ್ದೇಶಕರಾದ ಡಾ.ಹಿ.ಚಿ.ಬೋರಲಿಂಗಯ್ಯ ಅವರಿಗೆ ಹಾಗೂ ಪ್ರಸಾರಾಂಗದ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

**ಸೂಚನೆ :** ಪ್ರಸ್ತುತ ಅಧ್ಯಯನ ವರದಿಯಲ್ಲಿನ ಅಡಿಟಿಪ್ಪಣಿಗಳಲ್ಲಿ ಮತ್ತು ಪಠ್ಯದಲ್ಲಿ ಉಲ್ಲೇಖಗಳನ್ನು ಇಂಗ್ಲಿಷ್‌ನಲ್ಲೇ ನೀಡಲಾಗಿದೆ. ಸರಳ ಓದಿಗೆ ಇಂಗ್ಲಿಷ್ ಅಡ್ಡ ಅನ್ನಿಸಿದರೆ ಇಂಗ್ಲಿಷ್ ಉಲ್ಲೇಖಗಳನ್ನು ಬಿಟ್ಟು ಕನ್ನಡದ ಭಾಗ ವನ್ನು ಓದಿಕೊಳ್ಳಬಹುದು. ಇದರಿಂದ ಇಲ್ಲಿ ಪ್ರತಿಪಾದಿತವಾಗಿರುವ ವಿಚಾರಕ್ಕೆ ಯಾವುದೇ ಧಕ್ಕೆ ಉಂಟಾಗುವುದಿಲ್ಲ.

**ಟಿ.ಆರ್.ಚಂದ್ರಶೇಖರ**

# ಪರಿವಿಡಿ

೧

# ಪ್ರಸ್ತಾವನೆ

೧.೧. ಗ್ರಾಮಗಳನ್ನು ಕುರಿತ ಅಧ್ಯಯನಕ್ಕೆ ಭಾರತದಲ್ಲಿ ಸರಿಸುಮಾರು ೨೦೦ ವರ್ಷಗಳ ಇತಿಹಾಸವಿದೆ. ಈ ಅಧ್ಯಯನಗಳು ಭಾರತದ ಗ್ರಾಮಗಳನ್ನು ಪರಿಭಾವಿಸಿಕೊಂಡು ಬಂದಿರುವ ರೀತಿಯನ್ನು ಜನ್ ಬ್ರೆಮನ್ ಐದು ಬಗೆಗಳಾಗಿ ವರ್ಗೀಕರಿಸಿದ್ದಾರೆ.[೧]

೧. ವಸಾಹತುಶಾಹಿಗೊಳಗಾದ ಗ್ರಾಮ.

೨. ರಾಷ್ಟ್ರೀಯತೆಗೊಳಗಾದ ಗ್ರಾಮ.

೩. ಅಭಿವೃದ್ಧೀಕರಣಗೊಂಡ ಗ್ರಾಮ.

೪. ಮಾನವಶಾಸ್ತ್ರದ ವಸ್ತುವಾದ ಗ್ರಾಮ.

೫. ಜಾಗತೀಕರಣಗೊಂಡ ಗ್ರಾಮ.

ಭಾರತೀಯ ಗ್ರಾಮಗಳನ್ನು ಪರಿಭಾವಿಸಿಕೊಂಡು ಬಂದಿರುವ ಪರಿಯು ಸರ್ ಚಾರ್ಲ್ಸ್ ಮೆಟ್‌ಕಾಫ್‌ನ 'ಲಿಟಲ್ ರಿಪಬ್ಲಿಕ್ಸ್ 'ನಿಂದ ಪ್ರಾರಂಭವಾಗಿ(೧೮೩೦) ಗಾಂಧಿಯ 'ಗ್ರಾಮ ಸ್ವರಾಜ್ಯ'ವೆಂಬ ರೂಪ ತಳೆದು, ಸ್ವಾತಂತ್ರ್ಯಾನಂತರ ನೆಹರೂ ಯುಗದಲ್ಲಿ 'ಸಮುದಾಯ ಘಟಕ'ವಾಗಿ, ಎಪ್ಪತ್ತರ ದಶಕದಲ್ಲಿ ಇಂದಿರಾಗಾಂಧಿಯವರ ಫಲಾನುಭವಿ ಆಧರಿತ ಐಆರ್‌ಡಿಪಿಯ ಗುರಿಯಾಗಿ ಹರಿದುಕೊಂಡು ಬಂದು ಇಂದು ಅದು ಅಶೋಕ ಮೆಹತಾ, ನಜೀರ್ ಸಾಬ್, ರಾಜೀವ್ ಗಾಂಧಿ ಮುಂತಾದವರ ಶ್ರಮದ ಫಲವಾಗಿ 'ವಿಕೇಂದ್ರೀಕರಣ'ದ ಕೇಂದ್ರವೆಂಬಲ್ಲಿಗೆ ಬಂದು ನಿಂತಿದೆ.[೨] ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಪ್ರಕ್ರಿಯೆಗೆ ಒಳಗಾದ ಗ್ರಾಮ-ಗ್ರಾಮಪಂಚಾಯತಿಯು ಪ್ರಸ್ತುತ ಅಧ್ಯಯನದ ವಿಷಯ ವಸ್ತುವಾಗಿದೆ.

ಇತ್ತೀಚೆಗೆ ನಡೆದ ೨೦೦೧ರ ಜನಗಣತಿ ಪ್ರಕಾರ ಭಾರತದ ಗ್ರಾಮೀಣ ವಾಸಿಗಳ ಸಂಖ್ಯೆ ೭೪.೧೭ ಕೋಟಿ ಮತ್ತು ಅವರ ಪ್ರಮಾಣ ಶೇ ೭೨.೨೨. ಕರ್ನಾಟಕದಲ್ಲಿ ಗ್ರಾಮೀಣ ವಾಸಿಗಳ ಸಂಖ್ಯೆ ೩.೪೮ ಕೋಟಿ ಮತ್ತು ಪ್ರಮಾಣ ಶೇ ೬೬.೦೨. ನಗರೀಕರಣದ ಪ್ರಮಾಣವು ಕರ್ನಾಟಕದಲ್ಲಿ(ಶೇ ೩೩.೯೮) ಅಖಿಲ ಭಾರತಮಟ್ಟದಲ್ಲಿರುವ ಪ್ರಮಾಣಕ್ಕಿಂತ (ಶೇ ೨೭.೭೮) ಅಧಿಕವಾಗಿದೆ. (ಸೆನ್ಸಸ್ ಆಫ್ ಇಂಡಿಯಾ, ೨೦೦೧,

ಕರ್ನಾಟಕ). ಕೋಷ್ಟಕ ೧.೧ರಲ್ಲಿ ಕರ್ನಾಟಕದ ಗ್ರಾಮೀಣ ಮತ್ತು ನಗರ ವಾಸಿಗಳ ಪ್ರಮಾಣದ ಜಿಲ್ಲಾವಾರು ವಿವರ ನೀಡಲಾಗಿದೆ.

ಈ ಎಲ್ಲ ವಿವರಗಳ ಆಧಾರದ ಮೇಲೆ ಭಾರತವನ್ನು-ಕರ್ನಾಟಕವನ್ನು 'ಹಳ್ಳಿಗಳ ನಾಡು' ಎಂದು ವರ್ಣಿಸಿದರೆ ಅದರಲ್ಲಿ ಅಚ್ಚರಿ ಪಡುವಂತಹದೇನಿಲ್ಲ. ಗ್ರಾಮೀಣವೆಂದರೆ ಯಾವುದು ಎಂಬುದನ್ನು ತಿಳಿದುಕೊಳ್ಳಲು ನಾವು ಜನಗಣತಿ ವರದಿಗಳಲ್ಲಿ 'ನಗರ ಪ್ರದೇಶ'ದ ವ್ಯಾಖ್ಯೆಯನ್ನು ನೋಡಬೇಕಾಗುತ್ತದೆ.[೨]

**ಕೋಷ್ಟಕ ೧.೧**

**ಕರ್ನಾಟಕದಲ್ಲಿ ಗ್ರಾಮ ಮತ್ತು ನಗರವಾಸಿ ಜನಸಂಖ್ಯಾ ಪ್ರಮಾಣ : ೨೦೦೧**

| ಕ್ರ.ಸಂ. | ಜಿಲ್ಲೆಗಳು | ಗ್ರಾಮೀಣ ಜನಸಂಖ್ಯಾ ಪ್ರಮಾಣ | ಸ್ಥಾನ | ನಗರ ಜನಸಂಖ್ಯಾ ಪ್ರಮಾಣ | ಸ್ಥಾನ |
|---|---|---|---|---|---|
| ೧. | ಕೊಡುಗು | ೮೬.೨೧ | ೧ | ೧೩.೭೯ | ೧ |
| ೨. | ಚಾಮರಾಜನಗರ | ೮೪.೪೩ | ೨ | ೧೫.೩೭ | ೨ |
| ೩. | ಮಂಡ್ಯ | ೮೩.೯೮ | ೩ | ೧೬.೦೨ | ೩ |
| ೪. | ಕೊಪ್ಪಳ | ೮೩.೩೯ | ೪ | ೧೬.೬೧ | ೪ |
| ೫. | ಹಾಸನ | ೮೨.೩೦ | ೫ | ೧೭.೭೦ | ೫ |
| ೬. | ಚಿತ್ರದುರ್ಗ | ೮೧.೮೫ | ೬ | ೧೮.೧೫ | ೬ |
| ೭. | ಉಡುಪಿ | ೮೧.೪೦ | ೭ | ೧೮.೬೦ | ೭ |
| ೮. | ಚಿಕ್ಕಮಗಳೂರು | ೮೦.೪೮ | ೮ | ೧೯.೫೨ | ೮ |
| ೯. | ತುಮಕೂರು | ೮೦.೩೬ | ೯ | ೧೯.೬೪ | ೯ |
| ೧೦. | ಹಾವೇರಿ | ೭೯.೨೧ | ೧೦ | ೨೦.೭೯ | ೧೦ |
| ೧೧. | ಬೆಂಗಳೂರು ಗ್ರಾಮೀಣ | ೭೮.೩೩ | ೧೧ | ೨೧.೬೭ | ೧೧ |
| ೧೨. | ಬಿಜಾಪುರ | ೭೮.೧೩ | ೧೨ | ೨೧.೮೭ | ೧೨ |
| ೧೩. | ಬೀದರ್ | ೭೭.೦೬ | ೧೩ | ೨೨.೯೪ | ೧೩ |
| ೧೪. | ಬೆಳಗಾವಿ | ೭೫. ೯೪ | ೧೪ | ೨೪.೦೬ | ೧೪ |
| ೧೫. | ಕೋಲಾರ | ೭೫.೨೫ | ೧೫ | ೨೪.೯೫ | ೧೫ |
| ೧೬. | ರಾಯಚೂರು | ೭೪.೫೮ | ೧೬ | ೨೫.೪೨ | ೧೬ |

೨ ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ....

| | | | | | |
|---|---|---|---|---|---|
| ೧೭. | ಗುಲಬರ್ಗಾ | ೭೨.೮೭ | ೧೭ | ೨೭.೧೩ | ೧೭ |
| ೧೮. | ಉತ್ತರ ಕನ್ನಡ | ೭೧.೩೩ | ೧೮ | ೨೮.೬೭ | ೧೮ |
| ೧೯. | ಬಾಗಲಕೋಟೆ | ೭೧.೦೦ | ೧೯ | ೨೯.೦೦ | ೧೯ |
| ೨೦. | ದಾವಣಗೆರೆ | ೬೯.೭೦ | ೨೦ | ೩೦.೩೦ | ೨೦ |
| ೨೧. | ಶಿವಮೊಗ್ಗ | ೬೫.೨೧ | ೨೧ | ೩೪.೭೯ | ೨೧ |
| ೨೨. | ಬಳ್ಳಾರಿ | ೬೫.೧೪ | ೨೨ | ೩೪.೮೬ | ೨೨ |
| ೨೩. | ಗದಗ | ೬೪.೮೨ | ೨೩ | ೩೫.೧೮ | ೨೩ |
| ೨೪. | ಮೈಸೂರು | ೬೩.೧೦ | ೨೪ | ೩೬.೯೦ | ೨೪ |
| ೨೫. | ದಕ್ಷಿಣ ಕನ್ನಡ | ೬೧. ೫೯ | ೨೫ | ೩೮.೪೧ | ೨೫ |
| ೨೬. | ಧಾರವಾಡ | ೪೫.೦೨ | ೨೬ | ೫೪.೯೮ | ೨೬ |
| ೨೭. | ಬೆಂಗಳೂರು | ೧೧.೯೨ | ೨೭ | ೮೮.೦೮ | ೨೭ |
| | **ಕರ್ನಾಟಕ** | ೬೬.೦೨ | ---- | ೩೩.೯೮ | --- |

ಟಿಪ್ಪಣಿ : ಈ ಕೊಷ್ಟಕದಲ್ಲಿ ಗ್ರಾಮೀಣ ಜನಸಂಖ್ಯೆಯನ್ನು ಜಿಲ್ಲಾವಾರು ಅವರೋಹಣ ಕ್ರಮದಲ್ಲಿ ಮತ್ತು ನಗರ ಜನಸಂಖ್ಯೆಯ ಪ್ರಮಾಣವನ್ನು ಆರೋಹಣ ಕ್ರಮದಲ್ಲಿ ಜೋಡಿಸಲಾಗಿದೆ.

**ಮೂಲ : ಸೆನ್ಸ್‌ಸ್ ಆಫ್ ಇಂಡಿಯಾ ೨೦೦೧, ಸೀರೀಸ್ -೩೦, ಕರ್ನಾಟಕ, ಪೇಪರ್-** ೨, ೨೦೦೧, ಪ್ರಾವಿಷನಲ್ ಪಾಪ್ಯುಲೇಷನ್ ಟೇಬಲ್ಸ್, ರೂರಲ್-ಅರ್ಬನ್ ಪು.೧೯೬-೨೦೧

ಗ್ರಾಮೀಣವೆಂಬುದನ್ನು ಸರಳವಾಗಿ ಪರಿಭಾವಿಸಿಕೊಳ್ಳುವುದು ಸಾಧ್ಯವಿಲ್ಲ. ಅದೊಂದು ಬಹುಮುಖಿಯಾದ ಮತ್ತು ಸಂಕೀರ್ಣವಾದ ಒಂದು ಪರಿಭಾವನೆಯಾಗಿದೆ. ಗ್ರಾಮೀಣ ಎಂಬುದನ್ನು ನಾವು ಯಾವ ವೈಚಾರಿಕ-ಸೈದ್ಧಾಂತಿಕ ನೆಲೆಯಿಂದ ಪರಿಭಾವಿಸಿಕೊಳ್ಳುತ್ತೇವೆ ಎಂಬುದರ ಮೇಲೆ ಅದರ ಅರ್ಥ ಮತ್ತು ಮಹತ್ವ ನಿಂತಿದೆ. ಡಾ.ಬಿ.ಆರ್.ಅಂಬೇಡ್ಕರ್ ಅವರು ಭಾರತದ ಹಳ್ಳಿಗಳನ್ನು ಹೀಗೆ ವಿವರಿಸಿದ್ದಾರೆ.

"What is the village but a sink of localism, a den of ignorance, narrow-mindedness and communalism"[೪]

ಚಾರ್ಲ್ಸ್ ಮೆಟ್‌ಕಾಫ್‌ನ 'ಗಣರಾಜ್ಯ' ವೆಂಬ ಪರಿಭಾವನೆ ಬಗ್ಗೆ ಡಾ.ಬಿ.ಆರ್ .ಅಂಬೇಡ್ಕರ್ ತಮ್ಮ ವಿಚಾರವನ್ನು ಹೀಗೆ ಮಂಡಿಸಿದ್ದಾರೆ.

"......such is the picture of the inside life in an Indian village. In this republic, there is no place for democracy. There is no room for equality. There is no room for liberty. and there is no room for fraternity. The Indian village is the very negation of a republic"[೫]

**ನೀತಿ-ಕಾರ್ಯಕ್ರಮ**

ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ ಎಂಬ ನೀತಿ ಇದೆಯೇ ಅಥವಾ ಇತ್ತೆ ಎಂಬ ಪ್ರಶ್ನೆ ಕೇಳಿಕೊಂಡರೆ ಉತ್ತರ ನೀಡುವುದು ಕಷ್ಟ. ಅಭಿವೃದ್ಧಿ ಬಗ್ಗೆ ಅತ್ಯಂತ ಸ್ಪಷ್ಟವಾದ ನೀತಿಯಿದೆ. ಆದರೆ ಗ್ರಾಮೀಣ ಅಭಿವೃದ್ಧಿ ನೀತಿ ಎಂಬುದೊಂದಿದೆ ಎಂಬುದನ್ನು ಒಪ್ಪಿಕೊಳ್ಳುವುದು ಕಷ್ಟ. ನೀತಿಯಿಲ್ಲವೆಂಬ ಕಾರಣದ ಮೇಲೆ ಅದರ ಬಗ್ಗೆ ಕಾಳಜಿಯಿಲ್ಲ, ಆಸಕ್ತಿಯಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಸರ್ಕಾರಗಳು, ರಾಜಕೀಯ ಪಕ್ಷಗಳು, ಮುತ್ಸದ್ಧಿಗಳು ಮತ್ತು ವಿದ್ವಾಂಸರು ಗ್ರಾಮೀಣ ಅಭಿವೃದ್ಧಿಯನ್ನು ಒಂದು ಪ್ರಣಾಳಿಕೆಯ ರೀತಿಯಲ್ಲಿ ಪ್ರತಿಪಾದಿಸಿಕೊಂಡು ಬಂದಿರುವುದನ್ನು, ಬಂಡವಾಳದಂತೆ ಅದನ್ನು ಬಳಸಿಕೊಂಡು ಬಂದಿರುವುದನ್ನು ನಾವು ನೋಡಬಹುದಾಗಿದೆ. ಗೋವಿಂದ ವಲ್ಲಬ್ ಪಂತ್, ಚರಣ್‌ಸಿಂಗ್, ದೇವಿಲಾಲ್ ಮುಂತಾದವರು ಗ್ರಾಮೀಣ ಅಭಿವೃದ್ಧಿಯ ಉಗ್ರ ಪ್ರತಿಪಾದಕರಾಗಿದ್ದರು. ಅವಕಾಶ ದೊರೆತಾಗಲೆಲ್ಲ ಎಚ್.ಡಿ.ದೇವೇಗೌಡರು ತಮ್ಮ ರೈತರ ಪರವಾದ ವಿಚಾರಗಳನ್ನು ಮಂಡಿಸುತ್ತಿರುತ್ತಾರೆ. ಅವರು ಪ್ರಧಾನ ಮಂತ್ರಿಗಳಾಗಿದ್ದರು. ಚರಣ್‌ಸಿಂಗ್‌ರವರು ಪ್ರಧಾನ ಮಂತ್ರಿಗಳಾಗಿದ್ದರು. ಅವರುಗಳಿಗೆ ಗ್ರಾಮೀಣ ಅಭಿವೃದ್ಧಿಯನ್ನು ಒಂದು 'ನೀತಿ'ಯಾಗಿ ರೂಪಿಸುವುದು ಸಾಧ್ಯವಾಗಲಿಲ್ಲ. ಅದೊಂದು ನೀತಿ ನಿರೂಪಣೆಯಾಗಿ, ಪಾಲಿಸಿ ನಿರ್ಣಯವಾಗಿ ರೂಪುಗೊಳ್ಳಲೇ ಇಲ್ಲ. ಕೈಗಾರಿಕೆಗೆ ಸಂಬಂಧಿಸಿದಂತೆ ನೀತಿ ನಿರ್ಣಯವಿದೆ. ವಿದೇಶಿ ವ್ಯಾಪಾರಕ್ಕೆ ನೀತಿಯಿದೆ. ಕಾರ್ಮಿಕ ನೀತಿಯೆಂಬುದಿದೆ. ಗ್ರಾಮೀಣ ಅಭಿವೃದ್ಧಿಯೆಂಬ ನೀತಿಯಿಲ್ಲ, ಆದರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಿವೆ. ಕಾರ್ಯಕ್ರಮಗಳು ನೀತಿಯಲ್ಲ.[೬]

ಅಭಿವೃದ್ಧಿಯೆಂಬುದು ನಗರಕ್ಕೆ ಬೇರೆ, ಗ್ರಾಮೀಣಕ್ಕೆ ಬೇರೆಯಿರಲು ಸಾಧ್ಯವಿಲ್ಲ. ಅಭಿವೃದ್ಧಿಯೆಂದರೆ ಅಭಿವೃದ್ಧಿ, ಗ್ರಾಮವಾಸಿಯಾಗಿರಲಿ/ನಗರವಾಸಿಯಾಗಿರಲಿ, ಜನರ ಬದುಕು ಉತ್ತಮಗೊಳ್ಳುವ ಪರಿಯೇ ಅಭಿವೃದ್ಧಿ. ಗ್ರಾಮೀಣ ವಾಸಿಗಳ ಬದುಕು ಉತ್ತಮಗೊಳ್ಳುವ ಪರಿಯನ್ನು ಗ್ರಾಮೀಣ ಅಭಿವೃದ್ಧಿಯೆಂದು ಕರೆಯಬಹುದು. ಭಾರತದಲ್ಲಿ ನಗರ-ಗ್ರಾಮೀಣಗಳ ನಡುವಿನ ಭಿನ್ನತೆಯನ್ನು ಕೇವಲ ಸ್ಪೇಸ್ ನೆಲೆಯಲ್ಲಿ ಮಾತ್ರ ಪರಿಭಾವಿಸಿಕೊಳ್ಳಲಾಗಿದೆ. ಈಗಾಗಲೇ ನೋಡಿರುವಂತೆ ಜನಗಣತಿ ವರದಿಗಳಲ್ಲಿ ನಗರ ಪ್ರದೇಶವನ್ನು ನಿರ್ದಿಷ್ಟ ಸ್ಪೇಸ್ ಎಂಬ ರೀತಿಯಲ್ಲಿ ನಿರ್ವಚಿಸಿರುವುದನ್ನು ನೋಡಬಹುದು.(ನೋಡಿ : ಅಡಿ ಟಿಪ್ಪಣಿ : ೩) ಈ ನಿರ್ವಚನದಲ್ಲಿರುವ ಒಂದು ಸೂಕ್ಷ್ಮ

ಸಂಗತಿಯನ್ನು ನಾವು ಗುರುತಿಸಬೇಕಾಗಿದೆ. ಇಲ್ಲಿ ನಗರ ಪ್ರದೇಶವನ್ನು ಕೈಗಾರಿಕೆಗೆ ಮತ್ತು ಗ್ರಾಮೀಣವನ್ನು ಕೃಷಿಗೆ ಸಂವಾದಿಯಾಗಿ ಮಾಡಿರುವ ಸಂಗತಿಯನ್ನು ಗಮನಿಸಬೇಕಾಗುತ್ತದೆ.

ಗ್ರಾಮೀಣ ಅಭಿವೃದ್ಧಿ ಪರಿಭಾವನೆಯನ್ನು ಚರ್ಚಿಸುತ್ತಾ ಡಿ.ಎಂ.ನಂಜುಂಡಪ್ಪನವರು ಕೃಷಿ ಅಭಿವೃದ್ಧಿ, ಗ್ರಾಮೀಣ ಅಭಿವೃದ್ಧಿ-ಗ್ರಾಮ ಅಭಿವೃದ್ಧಿಗಳ ನಡುವೆ ಭಿನ್ನತೆಯನ್ನು ಅತ್ಯಂತ ಸ್ಪಷ್ಟವಾಗಿ ಗುರುತಿಸಿದ್ದಾರೆ.(ಡಿ.ಎಂ.ನಂಜುಂಡಪ್ಪ ೧೯೯೯:೨-೩) ಅವರ ಪ್ರಕಾರ ಕೃಷಿ ಅಭಿವೃದ್ಧಿಯೆಂಬುದು 'ಏಕ ವಲಯ' ಚಟುವಟಿಕೆಯಾಗಿದೆ. ಇದೊಂದು ತಂತ್ರಜ್ಞಾನ ನಿರ್ವಹಣಾ ಕಾರ್ಯಕ್ರಮವಾಗಿದೆ. ಕೃಷಿ ಉತ್ಪಾದನೆ ಮತ್ತು ಉತ್ಪಾದಕತೆಯನ್ನು ಗರಿಷ್ಟಗೊಳಿಸಿಕೊಳ್ಳುವುದು ಇದರ ಮುಖ್ಯ ಗುರಿಯಾಗಿದೆ. ಬಂಡವಾಳವುಳ್ಳ ಜಮೀನುದಾರರು ಮಾತ್ರ ಇದರ ಲಾಭ ಪಡೆದುಕೊಳ್ಳಬಹುದು. ಸ್ಥಳೀಯ ಅಭಿವೃದ್ಧಿ ಯೋಜನೆಯೆಂಬುದು ಇಲ್ಲದಿದ್ದರೆ ಇದರ ಲಾಭಗಳು ಸಣ್ಣ, ಅತಿಸಣ್ಣ ರೈತರನ್ನು, ಕೂಲಿಕಾರರನ್ನು ತಲುಪುವುದು ಸಾಧ್ಯವಿಲ್ಲ.

ಗ್ರಾಮಾಭಿವೃದ್ಧಿಯೆಂಬುದು ಮೂಲ ಸೌಲಭ್ಯಗಳ ಬೆಳವಣಿಗೆಗೆ ಸಂಬಂಧಿಸಿದೆ. ಒಳ್ಳೆಯ ರಸ್ತೆಗಳನ್ನು ನಿರ್ಮಿಸುವುದು. ಶಾಲೆ-ಆಸ್ಪತ್ರೆಗಳನ್ನು ಕಟ್ಟುವುದು, ಕುಡಿಯುವ ನೀರನ್ನು ಒದಗಿಸುವುದು ಮುಂತಾದ ಸಾಮಾಜಿಕ ಮೂಲಸೌಲಭ್ಯಗಳನ್ನು ಒದಗಿಸುವ ಚಟುವಟಿಕೆಗಳನ್ನು ಒಳಗೊಂಡ ಕಾರ್ಯಕ್ರಮವೇ ಗ್ರಾಮ ಅಭಿವೃದ್ಧಿ. ಗ್ರಾಮ ಅಭಿವೃದ್ಧಿಯೂ ಕೂಲಿಕಾರರನ್ನು, ಬಡರೈತರನ್ನು ಒಳಗೊಳ್ಳುವುದು ಸಾಧ್ಯವಿಲ್ಲ.

ಇವೆರಡಕ್ಕೂ ಭಿನ್ನವಾದ ಗ್ರಾಮೀಣ ಅಭಿವೃದ್ಧಿಯ ವ್ಯಾಪ್ತಿ ವಿಶಾಲವಾದುದು. ಗ್ರಾಮಗಳ ಮೂಲ ಸೌಲಭ್ಯಗಳ ಬೆಳವಣಿಗೆ ಮತ್ತು ಕೃಷಿ ಬೆಳವಣಿಗೆಗಳ ಜೊತೆಗೆ ಗ್ರಾಮಿಣ ಅಭಿವೃದ್ಧಿಯು ಕೈಗಾರಿಕೆಗಳ ನಿರ್ಮಾಣ, ಹಣಕಾಸು ವ್ಯವಸ್ಥೆ, ಬ್ಯಾಂಕುಗಳ ಸೌಲಭ್ಯಗಳ ವಿಸ್ತರಣೆ, ಪೌಷ್ಠಿಕ ಆಹಾರ ಒದಗಿಸುವುದು, ಸಾಕ್ಷರತೆಯನ್ನು ಉತ್ತಮಪಡಿಸುವುದು, ಮಾರುಕಟ್ಟೆಯ ಸಂಘಟನೆ ಮುಂತಾದ ಸಂಗತಿಗಳನ್ನು ಒಳಗೊಂಡಿದೆ. ಗ್ರಾಮೀಣ ಅಭಿವೃದ್ಧಿಯು ಬಹುವಲಯ-ಚಟುವಟಿಕೆಯಾಗಿದೆ. ಇದು ಆರ್ಥಿಕ ಪ್ರಗತಿ ಹಾಗೂ ಸಾಮಾಜಿಕ ಪ್ರಗತಿ ಎರಡನ್ನೂ ಒಳಗೊಂಡ ಒಂದು ಚಟುವಟಿಕೆಯಾಗಿದೆ. ಗ್ರಾಮೀಣ ಅಭಿವೃದ್ಧಿಯಲ್ಲಿ ತಂತ್ರಜ್ಞಾನ- ನೌಕರಶಾಹಿ ತಂತ್ರವು ಸುಧಾರಣಾವಾದಿ ತಂತ್ರಕ್ಕೆ ದಾರಿಮಾಡಿಕೊಡುತ್ತದೆ.

ವಿಕೇಂದ್ರೀಕರಣವೆಂಬುದು ಗ್ರಾಮೀಣ ಅಭಿವೃದ್ಧಿಗೆ ಹೋಲಿಸಿದರೆ ಆಧುನಿಕ ಪರಿಭಾವನೆಯಾಗಿದೆ. ಅದೊಂದು ಸಿದ್ಧಾಂತವಾಗಿ-ತತ್ವವಾಗಿ ೨೦ನೆಯ ಶತಮಾನದಲ್ಲಿ ರೂಪುಗೊಂಡ ವಿಚಾರವಾಗಿದೆ. ಅದರ ಮೂಲವನ್ನು ಪ್ರಾಚೀನ ಕಾಲಕ್ಕೆ ಒಯ್ಯುವ ಪ್ರಯತ್ನಗಳೂ ಇವೆ. 'ಪಂಚಾಯತ್', 'ಪಂಚರು' ಎಂಬ ನುಡಿಯ-ಸಂಸ್ಥೆಯ ಪ್ರಾಚೀನತೆಯನ್ನು ಆಧರಿಸಿ ವಿಕೇಂದ್ರೀಕರಣವು ಭಾರತದಲ್ಲಿ ಪ್ರಾಚೀನ ಕಾಲದಿಂದ

ಹರಿದುಕೊಂಡು ಬಂದ ಸಂಗತಿಯೆಂದು ಹೇಳಲಾಗುತ್ತಿದೆ. ಇಲ್ಲಿ ನಾವು ಗಮನಿಸಬೇಕಾದ ಸೂಕ್ಷ್ಮವೆಂದರೆ ಪ್ರಾಚೀನ ಕಾಲದಿಂದ ಹರಿದುಕೊಂಡು ಬಂದ ಪಂಚಾಯತ್ ವ್ಯವಸ್ಥೆ/ಸಂಸ್ಥೆ ಮತ್ತು ಇಂದು ಆಚರಣೆಯಲ್ಲಿರುವ ಪಂಚಾಯತ್ ವ್ಯವಸ್ಥೆ/ಸಂಸ್ಥೆಗಳ ನಡುವೆ ಗುಣಾತ್ಮಕ ವ್ಯತ್ಯಾಸಗಳಿವೆ. ಈ ಗುಣಾತ್ಮಕ ಭಿನ್ನತೆಯನ್ನು ಮರೆತರೆ ನಾವು ವಿಕೇಂದ್ರೀಕರಣದ ಮೂಲ ಆಶಯವನ್ನೇ ಮರೆತಂತಾಗುತ್ತದೆ. ಏಕೆಂದರೆ ವಿಕೇಂದ್ರೀಕರಣ, ಅದರಲ್ಲಿ ಎಷ್ಟೇ ಇತಿಮಿತಿಗಳಿದ್ದರು, ಒಂದು ಪ್ರಜಾಸತ್ತಾತ್ಮಕ ವ್ಯವಸ್ಥೆ. ಜನರ ಪ್ರಾತಿನಿಧಿಕ ವ್ಯವಸ್ಥೆ. ಆದರೆ ಪ್ರಾಚೀನ ಪಂಚಾಯತಿ, ಪಂಚರು, ಪ್ರಜಾಸತ್ತಾತ್ಮಕ ಸಂಸ್ಥೆಯಾಗಿರಲು ಸಾಧ್ಯವಿರಲಿಲ್ಲ.

ವಿಕೇಂದ್ರೀಕರಣಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ನೀತಿಯೆಂಬುದಿದೆ ನಿಜ. ಆದರೆ ಆರಂಭದಲ್ಲಿ ವಿಕೇಂದ್ರೀಕರಣ ಸಂಸ್ಥೆಗಳಿಗೆ ಸಂವಿಧಾನತ್ಮಕ ಸ್ಥಾನಮಾನಗಳನ್ನು ನೀಡಿರಲಿಲ್ಲ. ಅದಕ್ಕೆ ಸ್ಪಷ್ಟ ಕಾರಣಗಳಿದ್ದವು. ಗ್ರಾಮೀಣ ಪ್ರದೇಶದಲ್ಲಿದ್ದ ಜಾತಿ ಯಾಜಮಾನ್ಯ, ಜಮೀನುದಾರಿ ಪಾಳೆಗಾರಿಕೆ ಮತ್ತು ಸಾಮಾಜಿಕ ಶ್ರೇಣೀಕರಣಗಳನ್ನು ಗಮನದಲ್ಲಿಟ್ಟುಕೊಂಡು ಡಾ.ಬಿ.ಆರ್ .ಅಂಬೇಡ್ಕರ್ ಅವರು ಪಂಚಾಯತ್‌ರಾಜ್ ವ್ಯವಸ್ಥೆಗೆ ಸಂವಿಧಾನದೊಳಗೆ ರಾಜ್ಯ ನಿರ್ದೇಶನ ನೀತಿಯಲ್ಲಿ ಅವಕಾಶ ಮಾಡಿಕೊಟ್ಟರು.(ನಮ್ಮ ಗ್ರಾಮೀಣದ ಬಗ್ಗೆ ಬಿ.ಆರ್.ಅಂಬೇಡ್ಕರ್ ಯಾವ ವಿಚಾರ ಹೊಂದಿದ್ದರು ಎಂಬುದಕ್ಕೆ ಈ ವರದಿಯ ಪುಟ ೩ರಲ್ಲಿನ ಉಲ್ಲೇಖಗಳನ್ನು ನೋಡಿ)

ಇಂದು ನಮ್ಮ ಗ್ರಾಮೀಣದಲ್ಲಿ, ಜಾತಿಯಾಜಮಾನ್ಯ, ಜಮೀನುದಾರಿ ಪಾಳೆಗಾರಿಕೆ ಹಾಗೂ ಅಧಿಕಾರ ಸಂಬಂಧಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ವಿಣಿಶ್ರೇಣಿಗಳಲ್ಲಿ ಬದಲಾವಣೆಗಳಾಗಿವೆ. ಆದರೂ ಅಲ್ಲಿ ಪ್ರಜಾಪ್ರಭುತ್ವದ ಬೇರುಗಳು ಗಟ್ಟಿಯಾಗಿವೆ, ಅದರ ಹರವು ವಿಶಾಲವಾಗಿದೆ, ಆಚರಣೆಯಲ್ಲಿ ಅದು ಪಕ್ವವಾದ ರೂಪತಳೆದಿದೆಯೆಂದು ಧೈರ್ಯದಿಂದ ಹೇಳಲು ಸಾಧ್ಯವಿಲ್ಲ. ಈ ಬಗ್ಗೆ ವಿಕೇಂದ್ರೀಕರಣ ಮತ್ತು ಪ್ರಜಾಪ್ರಭುತ್ವ ಒಂದೇ ಅಲ್ಲ ಎನ್ನುವ ವಿಚಾರವನ್ನು ಕುರಿತಂತೆ ತೀವ್ರ ಚರ್ಚೆ ನಡೆಯುತ್ತಿದೆ. (ನೋಡಿ : ಜೀನ್ ಡ್ರೀಜ್ ಮತ್ತು ಅಮರ್ತ್ಯಸೆನ್, ೧೯೯೯: ಅಧ್ಯಾಯ ೧೦, ಭಾಗ ೧೦.೩, ಪು.೩೫೮-೩೬೨)

ಪ್ರಸ್ತುತ ಅಧ್ಯಯನದಲ್ಲಿ ವಿಕೇಂದ್ರೀಕರಣ ಮತ್ತು ಪ್ರಜಾಪ್ರಭುತ್ವಗಳ ನಡುವಿನ ಸಂಬಂಧವನ್ನು ಕುರಿತಂತೆ ಚರ್ಚಿಸಲು ಪ್ರಯತ್ನಿಸಲಾಗಿದೆ.

ವಿಕೇಂದ್ರೀಕೃತ ಸಂಸ್ಥೆಗಳಿಗೆ ಇಂದು ಸಂವಿಧಾನಾತ್ಮಕ ಸ್ಥಾನಮಾನ ಪ್ರಾಪ್ತವಾಗಿದೆ. ಸಂವಿಧಾನದ ೭೩ನೆಯ ತಿದ್ದುಪಡಿಯಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಮತ್ತು ೭೪ನೆಯ ತಿದ್ದುಪಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಅವಕಾಶ ಮಾಡಿಕೊಡಲಾಗಿದೆ. ಈ ತಿದ್ದುಪಡಿಗಳಿಂದಾಗಿ ಎರಡು ಹಂತದ ಒಕ್ಕೂಟವಾಗಿದ್ದ ಭಾರತವು ಇಂದು ಬಹುಹಂತದ ಒಕ್ಕೂಟ ವ್ಯವಸ್ಥೆಯಾಗಿ ರೂಪ ತಳೆದಿದೆ. ಗ್ರಾಮೀಣ ಅಭಿವೃದ್ಧಿಯ

ಜವಾಬ್ದಾರಿ ಸಂಪೂರ್ಣವಾಗಿ ಪಂಚಾಯಿತ್‌ರಾಜ್ ಸಂಸ್ಥೆಗಳ ಮೇಲೆ ಬಿದ್ದಿದೆ. ವಿಕೇಂದ್ರೀಕರಣ ವ್ಯವಸ್ಥೆಯನ್ನು ನಾವು ಪಂಚಾಯತ್‌ರಾಜ್ ವ್ಯವಸ್ಥೆಯೆಂದು ಕರೆಯಬಹುದು. ಬಹುಹಂತದ ಒಕ್ಕೂಟ ವ್ಯವಸ್ಥೆ ಹಾಗೂ ಸ್ಥಳೀಯ ಸರ್ಕಾರ ವ್ಯವಸ್ಥೆಯ ರೂಪವನ್ನು ಕೆಳಗಿನ ಚಿತ್ರದಲ್ಲಿ ತೋರಿಸಲಾಗಿದೆ (ಚಿತ್ರ-೧).

ಸ್ಥಳೀಯ ಸಂಸ್ಥೆಗಳನ್ನು ಸ್ವಯಂಮಾಡಳಿತ ಸಂಸ್ಥೆಗಳೆಂದು ಕರೆಯಲಾಗಿದೆ. ಗ್ರಾಮೀಣ ಸ್ಥಳೀಯ ಸಂಸ್ಥೆಗಳನ್ನು ಮೂರು ಹಂತಗಳಲ್ಲಿ ವ್ಯವಸ್ಥೆಗೊಳಿಸಲಾಗಿದೆ. ಈ ಮೂರು ಹಂತಗಳ ನಡುವೆ ಸಾವಯವ ಸಂಬಂಧವಿದೆ. ಆದರೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಇಂತಹ ಪರಸ್ಪರ ಸಂಬಂಧವಿಲ್ಲ. ಜನಸಂಖ್ಯೆಯ ಆಧಾರದ ಮೇಲೆ ಮಹಾನಗರ ಪಾಲಿಕೆ, ನಗರ ಸಭೆ ಹಾಗೂ ಪಟ್ಟಣ ಪಂಚಾಯತಿಗಳನ್ನು ಸಂಘಟಿಸಲಾಗುತ್ತಿದೆ.



ಚಿತ್ರ ೧

### ವಿಕೇಂದ್ರೀಕರಣ ಮತ್ತು ಗ್ರಾಮೀಣ ಅಭಿವೃದ್ಧಿ

ಗ್ರಾಮೀಣ ಅಭಿವೃದ್ಧಿಯು ಇಂದು ಗ್ರಾಮೀಣ ಸ್ಥಳೀಯ ಸಂಸ್ಥೆಗಳ ಜವಾಬ್ದಾರಿಯಾಗಿದೆ. ಸಂವಿಧಾನದ ೭೩ನೆಯ ತಿದ್ದುಪಡಿಯಿಂದ ಉಂಟಾದ ಬಹುಮುಖ್ಯ ಬೆಳವಣಿಗೆಯೆಂದರೆ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿ ನಿರ್ವಹಿಸುವ ಸಂಸ್ಥೆಗಳಾಗಿ ರೂಪುಗೊಂಡಿದ್ದಾಗಿದೆ. ಅಭಿವೃದ್ಧಿ ಮತ್ತು ಆಡಳಿತಗಳ ನಡುವೆ ಸ್ಪಷ್ಟವಾದ ವರ್ಗೀಕರಣವನ್ನು ಮಾಡಲಾಗಿದೆ. ಆಡಳಿತವು ರೆವಿನ್ಯೂ ಇಲಾಖೆಯ ಜವಾಬುದಾರಿಯಾದರೆ ಅಭಿವೃದ್ಧಿಯು ಜನರ ಪ್ರಾತಿನಿಧ್ಯವನ್ನು ಹೊಂದಿರುವ ಸ್ಥಳೀಯ ಸಂಸ್ಥೆಗಳ ಜವಾಬ್ದಾರಿಯಾಗಿದೆ. ಅನೇಕ ಸಂದರ್ಭಗಳಲ್ಲಿ ರೆವಿನ್ಯೂ ಇಲಾಖೆಯು ಸ್ಥಳೀಯ ಸಂಸ್ಥೆಗಳ ಜವಾಬ್ದಾರಿಯಾದ ಅಭಿವೃದ್ಧಿಯ ಜವಾಬ್ದಾರಿಯನ್ನು ನಿರ್ವಹಿಸುವ ಪ್ರಸಂಗಗಳು ಇಲ್ಲದೆ ಇಲ್ಲ. (ಚಂದ್ರಶೇಖರ ಟಿ.ಆರ್., ೨೦೦೨, ಪು.೧೯೦-೧೯೩)

### ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳು

ಒಂದು ಜಿಲ್ಲೆಯ ಅಥವಾ ತಾಲ್ಲೂಕಿನ ಸಮಗ್ರ ಅಭಿವೃದ್ಧಿ ಬಗ್ಗೆ ಯೋಜನೆ ಸಿದ್ಧಮಾಡಬೇಕಾದರೆ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳು ಸಂಯುಕ್ತವಾಗಿ ಕೆಲಸ ಮಾಡಬೇಕಾಗುತ್ತದೆ. ಆದರೆ ಕರ್ನಾಟಕದ ಸಂದರ್ಭದಲ್ಲಿ ಇವೆರಡರ ಸಂಯೋಜನೆಯಿಂದ ಸಮಗ್ರ ಜಿಲ್ಲಾ ಅಭಿವೃದ್ಧಿ ಯೋಜನೆ ಸಿದ್ಧಪಡಿಸುವ ಕೆಲಸ ನಡೆದಿಲ್ಲ. ಇಂತಹ ಕಾರ್ಯಭಾರವನ್ನು ನಿರ್ವಹಿಸುವ ಉದ್ದೇಶದಿಂದ 'ಜಿಲ್ಲಾ ಯೋಜನಾ ಸಮಿತಿ'ಗಳನ್ನು ರೂಪಿಸಲಾಗಿದೆ. ಜಿಲ್ಲಾ ಯೋಜನಾ ಸಮಿತಿಯು ಸಂವಿಧಾನಾತ್ಮಕ ಸಂಸ್ಥೆಯಾಗದೆ.[೭] ಕರ್ನಾಟಕದಲ್ಲಿ ಸದ್ಯ ಅವು ನಿಷ್ಕ್ರಿಯವಾಗಿ ಬಿಟ್ಟಿವೆ. ಅವುಗಳನ್ನು ಕ್ರಿಯಾಶೀಲವಾಗಿಸಬೇಕಾಗಿದೆ. ವಿಕೇಂದ್ರೀಕರಣ ವ್ಯವಸ್ಥೆಗೆ ಸಂಬಂಧಿಸಿದ ಸಂಸ್ಥೆಗಳನ್ನು ಸಬಲೀಕರಣಗೊಳಿಸುವ ಅಗತ್ಯವಿದೆ. ಆಗ ಮಾತ್ರ ವಿಕೇಂದ್ರೀಕರಣ ಮತ್ತು ಗ್ರಾಮೀಣ ಅಭಿವೃದ್ಧಿಗೆ ಅರ್ಥ ಬರುತ್ತದೆ. ನಗರ ಸ್ಥಳೀಯ ಸಂಸ್ಥೆಗಳು ಇಂದು ಸ್ವತಂತ್ರವಾಗಿ ಕೆಲಸ ಮಾಡುತ್ತಿವೆ. ಅವುಗಳ ಕಾರ್ಯಚಟುವಟಿಕೆಗಳನ್ನು ಜಿಲ್ಲೆ-ತಾಲ್ಲೂಕು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ವಿಲೀನಗೊಳಿಸುವ ಅಗತ್ಯವಿದೆ. ಸಂಪನ್ಮೂಲಗಳ ದೃಷ್ಟಿಯಿಂದ ನಗರ ಸ್ಥಳೀಯ ಸಂಸ್ಥೆಗಳು ಸಮೃದ್ಧವಾಗಿದೆ. ಅವುಗಳ ಸಮೃದ್ಧತೆಯಲ್ಲಿ ಗ್ರಾಮೀಣದ ಪಾತ್ರ ಮಹತ್ವದ್ದಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ವಿಕೇಂದ್ರೀಕರಣ ಮತ್ತು ಗ್ರಾಮೀಣ ಅಭಿವೃದ್ಧಿ ಹಾಗೂ ಅವುಗಳ ನಡುವಿನ ಸಂಬಂಧವನ್ನು ಕುರಿತಂತೆ ಅನೇಕ ಪ್ರಶ್ನೆಗಳನ್ನು ಪರಿಶೀಲಿಸಲು ಪ್ರಯತ್ನಿಸಲಾಗಿದೆ. ವಿಕೇಂದ್ರೀಕರಣ ವ್ಯವಸ್ಥೆಯ ಚೌಕಟ್ಟಿನಲ್ಲಿ ಗ್ರಾಮೀಣ ಅಭಿವೃದ್ಧಿ ಹೇಗೆ ನಡೆದಿದೆ? 'ಜನರಿಗೆ ಅಧಿಕಾರ' ಎಂಬ ತತ್ವ ಹಾಗೂ ಘೋಷಣೆ ಆಧಾರದ ಮೇಲೆ ಅಸ್ತಿತ್ವಕ್ಕೆ ಬಂದ ಪಂಚಾಯತ್‌ರಾಜ್ ಸಂಸ್ಥೆಗಳು ಗ್ರಾಮ ಮಟ್ಟದಲ್ಲಿ

ಅಭಿವೃದ್ಧಿಯನ್ನು ಹೇಗೆ ನಿರ್ವಹಿಸುತ್ತಿವೆ? ಗ್ರಾಮಪಂಚಾಯಿತಿಗಳು ಎಷ್ಟರ ಮಟ್ಟಿಗೆ ಸ್ವಯಂಮಾಡಳಿತ ಸಂಸ್ಥೆಗಳಾಗಿವೆ? ಜನರ ಸಹಭಾಗಿತ್ವವನ್ನು ಅವು ಎಷ್ಟರ ಮಟ್ಟಿಗೆ ಸಾಧಿಸಿಕೊಂಡಿವೆ? ವಿಕೇಂದ್ರೀಕರಣ ಮತ್ತು ಗ್ರಾಮೀಣ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ರಾಜಕೀಯ ಪಕ್ಷಗಳ ಪಾತ್ರವೇನು? ಪ್ರಜಾಪ್ರಭುತ್ವದ ವ್ಯಾಪ್ತಿಯನ್ನು ವಿಸ್ತರಿಸುವಲ್ಲಿ ವಿಕೇಂದ್ರೀಕರಣ ಎಷ್ಟರ ಮಟ್ಟಿಗೆ ಉಪಯುಕ್ತವಾಗಿದೆ? ಗ್ರಾಮೀಣ ಅಭಿವೃದ್ಧಿಯು ಸಮಾಜದ ಅಂಚಿನಲ್ಲಿರುವ ಜನರನ್ನು ತಲುಪುತ್ತಿದೆಯೇ? ವಿಕೇಂದ್ರೀಕರಣ ಪ್ರಯೋಗದ ಹಿನ್ನೆಲೆಯಲ್ಲಿ ಗ್ರಾಮಗಳಲ್ಲಿ ಅಧಿಕಾರ ಸಂಬಂಧಗಳು ಯಾವ ಬಗೆಯಲ್ಲಿ ಬದಲಾಗಿವೆ? ಮೀಸಲಾತಿಯಿಂದ ಉಂಟಾಗಿರುವ ಬದಲಾವಣೆಗಳ ಸ್ವರೂಪ ಯಾವ ಬಗೆಯದು? ಈ ವ್ಯವಸ್ಥೆಯಲ್ಲಿ ಜನರು ಕೇವಲ ಫಲಾನುಭವಿಗಳಾಗಿದ್ದಾರೋ ಅಥವಾ ಕ್ರಿಯಾಶೀಲ ನಿಯೋಗಿಗಳಾಗಿದ್ದಾರೋ? ಮಹಿಳೆಯರ ಸ್ಥಿತಿಗತಿಯಲ್ಲಿ ಯಾವ ಬಗೆಯ ಬದಲಾವಣೆಗಳಾಗುತ್ತಿವೆ? ಈ ಬಗೆಯ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನ ಮಾಡಲಾಗಿದೆ. ಈ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲಾಗಿದೆ ಎನ್ನುವುದಕ್ಕಿಂತ ಅವುಗಳನ್ನು ಕುರಿತು ಚರ್ಚಿಸಲಾಗಿದೆ- ಅವುಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ ಎಂಬುದು ಹೆಚ್ಚು ಸೂಕ್ತ.

**ರಾಜಕೀಯ ವೈಫಲ್ಯ**

ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಕಗಳು ನಿರೀಕ್ಷಿಸಿದ ಮಟ್ಟದಲ್ಲಿ ಫಲಗಳನ್ನು ನೀಡುತ್ತಿಲ್ಲ. ಅಲ್ಲಿ ಅನೇಕ ಬಗೆಯ ಸಮಸ್ಯೆಗಳಿವೆ. ಇಲ್ಲಿರುವ ಸಮಸ್ಯೆಗಳು ಕೇವಲ ಶಾಸನಾತ್ಮಕವಾದವುಗಳಲ್ಲ ಅಥವಾ ಆಡಳಿತಾತ್ಮಕವಾದವುಗಳಲ್ಲ. ಗ್ರಾಮೀಣ ಅಭಿವೃದ್ಧಿ- ವಿಕೇಂದ್ರೀಕರಣ - ಇವು ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಸಂಭವಿಸಬೇಕಾದ ಸಂಗತಿಗಳಾಗಿವೆ.[೮] ಅವು ಸ್ವತಂತ್ರವಾಗಿ ಬದಲಾವಣೆ ಉಂಟು ಮಾಡಲು-ಫಲಗಳನ್ನು ನೀಡಲು ಸಾಧ್ಯವಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳಿಗೆ ಸಂಬಂಧಿಸಿದ ವೈಫಲ್ಯವನ್ನು ರಾಜಕಾರಣದ ನೆಲೆಯಲ್ಲಿ ಪರಿಭಾವಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಅವರುಗಳು 'ಅನೂಚಾನವಾಗಿ ಹರಿದುಕೊಂಡು ಬಂದಿರುವ ಬೇಧಿಸಲಾಗದಂತಹ ಅಸಮಾನತೆಗಳು' ಎಂದು ಯಾವುದನ್ನು ಕರೆದಿದ್ದಾರೋ ಅವು ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳ ವೈಫಲ್ಯದ ಮೂಲದಲ್ಲಿದ್ದಾವೆ.[೯]

ಅಭಿವೃದ್ಧಿ, ವಿಕೇಂದ್ರೀಕರಣ, ಲಿಂಗಸಮಾನತೆ, ಮಹಿಳೆಯರ ಸಬಲೀಕರಣ, ಬಡತನದ ನಿವಾರಣೆ, ಮೀಸಲಾತಿ, ಸಹಭಾಗಿತ್ವ ಮುಂತಾದ ಪರಿಭಾವನೆಗಳು ಮೌಲ್ಯ ನಿರಪೇಕ್ಷ, ದೇಶ-ಕಾಲ-ಸಂದರ್ಭಗಳಿಗೆ ಅತೀತವಾದ ಸಂಗತಿಗಳಲ್ಲ. ಪ್ರಸ್ತುತ ಅಧ್ಯಯನದಲ್ಲಿ ಅವುಗಳನ್ನು ಮೌಲ್ಯಸ್ಪಂದಿ-ಸಂದರ್ಭಸ್ಪಂದಿ ಸಂಗತಿಗಳಾಗಿ ಪರಿಭಾವಿಸಿ

ಕೊಳ್ಳಲಾಗಿದೆ. ಈ ಪರಿಭಾವನೆಗಳಿಗೆ 'ಅದೋ ಅಲ್ಲಿದೆ' ಎಂಬ ಬಗೆಯ ಅರ್ಥಗಳಿರುವುದಿಲ್ಲ. ಪ್ರತಿಯಾಗಿ ಅವು ಒಂದು ಸಾಮಾಜಿಕ-ಆರ್ಥಿಕ-ರಾಜಕೀಯ ಸಂದರ್ಭದಲ್ಲಿ ಅರ್ಥವನ್ನು ಪಡೆದುಕೊಳ್ಳುತ್ತವೆ ಎಂಬ ನಂಬಿಕೆಯ ಮೇಲೆ ಪ್ರಸ್ತುತ ಅಧ್ಯಯನವನ್ನು ಕಟ್ಟಲಾಗಿದೆ. ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಇಲ್ಲಿ 'ರಾಜಕೀಯ ವೈಫಲ್ಯದ ಸಂಕಥನ'ವೆಂದು ಕರೆಯಲಾಗಿದೆ.

ರಾಜಕೀಯ ವೈಫಲ್ಯವೆಂಬುದನ್ನು ಇಲ್ಲಿ ಒಂದು ನಿರ್ದಿಷ್ಟ ಅರ್ಥದಲ್ಲಿ ಬಳಸಲಾಗಿದೆ. ಇದನ್ನು ಎರಡು ನೆಲೆಗಳಿಂದ ನೋಡುವುದು ಸಾಧ್ಯ. ವೈಫಲ್ಯ ಎಂಬುದನ್ನು ಕಾರ್ಯಕ್ಷಮತೆಯ ನೆಲೆಯಿಂದ ನೋಡಬಹುದು. ಎರಡನೆಯದಾಗಿ ಸಾಮಾಜಿಕ ಬದಲಾವಣೆ ನೆಲೆಯಿಂದ ನೋಡಬಹುದು. ಮೊದಲನೆಯದು ಸಿದ್ಧಮಾದರಿಯಾದರೆ - ತಾಂತ್ರಿಕವಾದ ವಿಧಾನವಾದರೆ ಎರಡನೆಯದು ಕ್ರಿಟಿಕಲ್ ಆದ-ವ್ಯಕ್ತಿನಿಷ್ಟವಾದ ವಿಧಾನವಾಗಿದೆ. ಅಭಿವೃದ್ಧಿ ಕಾರ್ಯಕ್ರಮಗಳು ಅಥವಾ ಶಾಸನಾತ್ಮಕ ಕ್ರಮಗಳು ನಿರೀಕ್ಷಿಸಿದ ಉದ್ದೇಶಗಳನ್ನು ಎಲ್ಲಿ ಈಡೇರಿಸಿಬಿಡುತ್ತವೊ ಅಲ್ಲಿ ಅವುಗಳನ್ನು 'ಸಫಲ'ವಾದ ಸಂಗತಿಗಳೆಂದೂ, ನಾವು ನಿರೀಕ್ಷಿಸಿದ ಮಟ್ಟದಲ್ಲಿ, 'ವೆಚ್ಚ-ಪ್ರತಿಫಲ' ನೆಲೆಯಲ್ಲಿ ಫಲಗಳನ್ನು ನೀಡುವುದಿಲ್ಲವೋ ಅಲ್ಲಿ ಅವುಗಳನ್ನು 'ವಿಫಲ'ವಾದ ಸಂಗತಿಗಳೆಂದು ಕರೆಯಲಾಗಿದೆ. ಯಶಸ್ಸು-ವೈಫಲ್ಯಗಳನ್ನು ಹೀಗೆ ಪರಿಭಾವಿಸಿಕೊಳ್ಳಬಹುದು. ಖಾಸಗೀಕರಣದ ಹಿಂದಿನ ಸಿದ್ಧಾಂತಿಕ ನೆಲೆ ಇದೆ ಆಗಿದೆ. ಸಾರ್ವಜನಿಕ ವಲಯದ ವೈಫಲ್ಯವನ್ನು ಹೀಗೆ ಪರಿಭಾವಿಸಿಕೊಂಡು ಅವುಗಳನ್ನು ಟೀಕಿಸಲಾಗುತ್ತದೆ.

ಯಶಸ್ಸು/ವೈಫಲ್ಯವನ್ನು ಸಾಮಾಜಿಕ ನೆಲೆಯಿಂದಲೂ ಪರಿಭಾವಿಸಿಕೊಳ್ಳಬಹುದಾಗಿದೆ. ಅಭಿವೃದ್ಧಿ ಕಾರ್ಯಕ್ರಮ ಅಥವಾ ಶಾಸನಾತ್ಮಕ ಕ್ರಮ ಸಮಾಜದ ಯಾವ ವರ್ಗವನ್ನು ಒಳಗೊಂಡಿದೆ? ಅದು ಸಮಾಜದ ಯಾವ ವರ್ಗಕ್ಕೆ ಫಲನೀಡುತ್ತಿದೆ? ಅದು ಒಳಗೊಳ್ಳುವ ಜನರ ಸ್ವರೂಪ ಯಾವ ಬಗೆಯದು? ಎನ್ನುವ ನೆಲೆಯಿಂದ ಸಾಫಲ್ಯ/ ವೈಫಲ್ಯಗಳನ್ನು ಚರ್ಚಿಸಬಹುದಾಗಿದೆ. ಅಭಿವೃದ್ಧಿ-ವಿಕೇಂದ್ರೀಕರಣಗಳು ಯಾವ ಬಗೆಯ ಸಾಮಾಜಿಕ ಬದಲಾವಣೆಗಳನ್ನು ತಂದಿವೆ? ಈ ಬದಲಾವಣೆಗೆಗಳ ರಾಜಕಾರಣ ಯಾವ ಬಗೆಯದು? ಈ ದೃಷ್ಟಿಯಿಂದ ಇಂತಹ ಪ್ರಶ್ನೆಗಳ ಹಿನ್ನೆಲೆಯಲ್ಲಿ ಸಾಫಲ್ಯ-ವೈಫಲ್ಯವನ್ನು ಪರಿಭಾವಿಸಿಕೊಳ್ಳುವುದು ಹೆಚ್ಚು ಅರ್ಥಪೂರ್ಣವೆಂದು ಭಾವಿಸಲಾಗಿದೆ.

ಅಭಿವೃದ್ಧಿ ಕಾರ್ಯಕ್ರಮ - ವಿಕೇಂದ್ರೀಕರಣಗಳು ಜನರನ್ನು ಹೇಗೆ ಒಳಗೊಳ್ಳುತ್ತಿವೆ ಎಂಬುದೇ ಅದರ ವಿಮರ್ಶೆಯ ಮಾನದಂಡವಾಗಿದೆ. ಇನ್‌ಫೋಸಿಸ್ ಅತ್ಯಂತ ಯಶಸ್ವಿ ಉದ್ದಿಮೆಯಾಗಿದೆ. ಅದೊಂದು ಯಶಸ್ವಿ ಉದ್ದಿಮೆ ಎಂದಾಗ ಅಲ್ಲಿ ಮೊದಲನೆಯ ಮಾನದಂಡವನ್ನು ಬಳಸಲಾಗಿದೆ. ಆದರೆ ಸಾಮಾಜಿಕ ಮಾನದಂಡದ ನೆಲೆಯಿಂದ ನೋಡಿದಾಗ ಅದೊಂದು ಯಶಸ್ವಿ ಉದ್ದಿಮೆಯೆಂದು ಭಾವಿಸಲು ಸಾಧ್ಯವಿಲ್ಲ. ಸಮಾಜದ

ಏಣಿಶ್ರೇಣಿಯಲ್ಲಿ ಅಂಚಿನಲ್ಲಿ-ಕಟ್ಟಕಡೆಯಲ್ಲಿರುವ ವಂಚಿತರನ್ನು ಇನ್‌ಫೋಸಿಸ್ ಒಳಗೊಳ್ಳುವುದು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಅದೊಂದು ಅನುಪಯುಕ್ತ ಸಂಗತಿಯಾಗಿದೆ.

ಈ ಬಗೆಯ ಸಾಮಾಜಿಕ ವೈಫಲ್ಯಗಳ ಬಗ್ಗೆ ಇನ್‌ಫೋಸಿಸ್ ನಂತಹ ಉದ್ದಿಮೆಗಳಿಗೆ ಅರಿವಿದೆ. ಈ ತಮ್ಮ ವೈಫಲ್ಯವನ್ನು ಮೀರಲು ಅವು ಪ್ರಯತ್ನಿಸುತ್ತಿವೆ. ಇಂತಹ ಉದ್ದಿಮೆಗಳಿಗೆ ಸಂಬಂಧಿಸಿದ ಮಹಿಳೆಯರು ಸಾಮಾಜಿಕ ಸೇವೆಯನ್ನು ದೊಡ್ಡ ಪ್ರಮಾಣದಲ್ಲಿ ಕೈಗೊಂಡಿದ್ದಾರೆ. ಈ ಉದ್ದಿಮೆಗಳು ನಡೆಸುತ್ತಿರುವ ಸಾಮಾಜಿಕ ಸೇವೆಯು ಅವುಗಳ ಸಾಮಾಜಿಕ ವೈಫಲ್ಯವನ್ನು ಮುಚ್ಚಿಕೊಳ್ಳಲು ನಡೆಸುತ್ತಿರುವ ಒಂದು ಪ್ರಯತ್ನವೇ ವಿನಾ ಅದೇ ಅವುಗಳ ಮೂಲ ಉದ್ದೇಶವಲ್ಲ. ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಸಾಮಾಜಿಕ ನೆಲೆಯಿಂದ ಪರಿಭಾವಿಸಿಕೊಳ್ಳಲಾಗಿದೆ. ಈ ಉದ್ದೇಶದಿಂದಲೇ ಅದನ್ನು 'ರಾಜಕೀಯ ವೈಫಲ್ಯದ ಸಂಕಥನ'ವೆಂದು ಕರೆಯಲಾಗಿದೆ. ಇಲ್ಲಿ ವೈಫಲ್ಯವನ್ನು ಸಾಮಾಜಿಕ ವ್ಯಾಪ್ತಿ, ಸಾಮಾಜಿಕ ಚಾಚು, ಜನರ ಸಹಭಾಗಿತ್ವ, ಜನರ ಕ್ರಿಯಾಶೀಲತೆ, ಜನರ ನಿಯೋಗ ಎಂಬ ನೆಲೆಯಲ್ಲಿ ಚರ್ಚಿಸಲಾಗಿದೆ ಮತ್ತು ಪರಿಭಾವಿಸಿಕೊಳ್ಳಲಾಗಿದೆ.

### ೧.೨. ಅಧ್ಯಯನದ ಉದ್ದೇಶಗಳು

ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳ ನಡುವಿನ ಸಂಬಂಧವನ್ನು ಮತ್ತು ಅವು ಗ್ರಾಮಗಳಲ್ಲಿ ಹೇಗೆ ಸಂಭವಿಸುತ್ತಿವೆ ಎಂಬುದನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿ ಹಾಗೂ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನಮ್ಮ ಅನುಭವಕ್ಕೆ ಬಂದ ಸಂಗತಿಗಳ ಹಿನ್ನೆಲೆಯಲ್ಲಿ ಚರ್ಚಿಸುವುದು ಪ್ರಸ್ತುತ ಅಧ್ಯಯನದ ಪ್ರಧಾನ ವಿಷಯ ವಸ್ತುವಾಗಿದೆ. ನಿರ್ದಿಷ್ಟವಾಗಿ ಈ ಅಧ್ಯಯನದ ಉದ್ದೇಶಗಳು ಹೀಗಿವೆ.

೧. ಕರ್ನಾಟಕದಲ್ಲಿ ಆಚರಣೆಗೆ ವಿಕೇಂದ್ರೀಕರಣವು ಬಂದ ಬಗೆಯನ್ನು ಚಾರಿತ್ರಿಕವಾಗಿ, ಸಂಕ್ಷಿಪ್ತವಾಗಿ ಹಿಡಿದಿಡುವುದು.

೨. ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳು ನಮ್ಮ ಗ್ರಾಮೀಣ ಪ್ರದೇಶದ ಸಾಮಾಜಿಕ-ರಾಜಕೀಯ-ಆರ್ಥಿಕ-ಸಾಂಸ್ಕೃತಿಕ ಸಂರಚನೆ ಹಾಗೂ ಸಂಘಟನೆಗಳಿಗೆ ಸಂಬಂಧಿಸಿದಂತೆ ಯಾವ ರೀತಿಯ ಬದಲಾವಣೆಗಳನ್ನು ಉಂಟು ಮಾಡಿವೆ ಎಂಬುದನ್ನು ಗುರುತಿಸುವುದು.

೩. ಜನರ ಪ್ರಾತಿನಿಧ್ಯ ಮತ್ತು ಜಾತಿ ಯಾಜಮಾನ್ಯಗಳ ನಡುವಿನ ಸಂಬಂಧವನ್ನು ಪರಾಮರ್ಶಿಸುವುದು.

೪. ಅಭಿವೃದ್ಧಿಯ ಫಲಗಳು ಜನರಿಗೆ ಹೇಗೆ ತಲುಪುತ್ತಿವೆ ಎಂಬುದನ್ನು ವಿಮರ್ಶಿಸುವುದು.

೫. ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳ ಹಿನ್ನೆಲೆಯಲ್ಲಿ ಗುರುತಿಸುವುದು.

೬. ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳ ಜನತಾಂತ್ರಿಕ ಸ್ವರೂಪವನ್ನು ಹಿಡಿದಿಡುವುದು.

೭. ಕೊನೆಯದಾಗಿ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳ ಹಿಂದಿನ ರಾಜಕಾರಣವನ್ನು ಗುರುತಿಸುವುದು.

**೧.೩. ಅಧ್ಯಯನ ವಿಧಾನ**

ಸಮಾಜ ವಿಜ್ಞಾನಗಳಲ್ಲಿ ಲಾಗಾಯ್ತಿನಿಂದ ರೂಢಿಯಲ್ಲಿರುವ ಅತ್ಯಂತ ಜನಪ್ರಿಯ ಅಧ್ಯಯನ ವಿಧಾನವೆಂದರೆ ಕಾರಣ ಮೀಮಾಂಸಾ ವಿಧಾನವಾಗಿದೆ. ಇದನ್ನು ಕಾರಣ ಪ್ರಣೀತ ವಿವರಣಾ ವಿಧಾನವೆಂದು ಕರೆಯಬಹುದು. ಇದಕ್ಕೆ ಭಿನ್ನವಾದ-ಪ್ರತಿಯಾದ ಅನೇಕ ವಿಧಾನಗಳೂ ಆಚರಣೆಯಲ್ಲಿವೆ. ಉದಾಹರಣೆಗೆ ಕ್ರಿಯಾತ್ಮಕ ವೈಚಾರಿಕತೆ ವಿಧಾನವಿದೆ. ಅರ್ಥಗ್ರಹಣ ಪದ್ಧತಿಯಿದೆ. ಕ್ರಿಟಿಕಲ್ ಥಿಯರಿ ವಿಧಾನವಿದೆ. ಎಂಫೆರಿಕಲ್ ಅಧ್ಯಯನವಾದ ಕಾರಣ ಮೀಮಾಂಸಾ ವಿಧಾನವು ಹೆಚ್ಚು ಪ್ರಚಲಿತದಲ್ಲಿದೆ. ಕೆಲವು ವಿದ್ವಾಂಸರು ಎರಡು ಮತ್ತು ಎರಡಕ್ಕಿಂತ ಹೆಚ್ಚು ವಿಧಾನಗಳನ್ನು ಸಂಯೋಜಿಸಿ ಸಂಯುಕ್ತ ವಿಧಾನವನ್ನು ರೂಪಿಸಿರುವ, ಬಳಸಿರುವ ನಿದರ್ಶನಗಳೂ ಇವೆ. ಪ್ರಸ್ತುತ ಅಧ್ಯಯನದಲ್ಲಿ ಅಂತಹ ಸಂಯುಕ್ತ, ಸಂಯೋಜಿತ ವಿಧಾನವೊಂದನ್ನು ಬಳಸಲಾಗಿದೆ. ಕಾರಣ ಮೀಮಾಂಸಾ ವಿಧಾನದ ಮುಖ್ಯ ನಿಯಮವಾದ 'ವಸ್ತುನಿಷ್ಠತೆ'ಯನ್ನು ಇಲ್ಲಿ ಕೈಬಿಡಲಾಗಿದೆ. ಪ್ರಖ್ಯಾತ ಸಮಾಜ ವಿಜ್ಞಾನಿ ವಿಲ್‌ಹೆಲ್ಮ್ ಡಿಲ್ಥೆ(೧೯೯೬ : ಪು.೩೬) ಹೇಳುವಂತೆ ಅಧ್ಯಯನ ನಡೆಸುವ ವಿದ್ವಾಂಸರು ತಾವು ಅಧ್ಯಯನ ನಡೆಸುತ್ತಿರುವ ವಿಷಯದ ಬಗ್ಗೆ ಎಷ್ಟೇ ವಸ್ತುನಿಷ್ಠವಾಗಿದ್ದೇವೆಂದು ಹೇಳಿಕೊಂಡರೂ ಅವರು ಬದುಕನ್ನು, ಸಮಾಜವನ್ನು ನೋಡುವ, ಪರಿಭಾವಿಸಿಕೊಳ್ಳುವ ದೃಷ್ಟಿಕೋನವು ಅವರ ಅಧ್ಯಯನವನ್ನು ಪ್ರಭಾವಿಸುತ್ತಿರುತ್ತದೆ.[೦] ಮೌಲ್ಯ ನಿರಪೇಕ್ಷತೆಯೆಂಬುದು ಅಧ್ಯಯನಗಳಲ್ಲಿ, ಅದರಲ್ಲೂ ಸಮಾಜ ವಿಜ್ಞಾನಗಳ ಸಂದರ್ಭದಲ್ಲಿ ಸಾಧ್ಯವಿಲ್ಲ ಮತ್ತು ಅಗತ್ಯವಿಲ್ಲ. ನಮ್ಮ ಅಧ್ಯಯನದ ವಿಷಯಗಳಾದ ಗ್ರಾಮೀಣ, ಅಭಿವೃದ್ಧಿ, ವಿಕೇಂದ್ರೀಕರಣ, ಮೀಸಲಾತಿ, ಬಡತನ, ಲಿಂಗ ಸಂಬಂಧಗಳು ಮುಂತಾದವುಗಳು ಮೂಲಭೂತವಾಗಿ ಮೌಲ್ಯನಿಷ್ಠ ಸಂಗತಿಗಳಾಗಿವೆ. ಅವುಗಳನ್ನು ಮೌಲ್ಯನಿಷ್ಠ ಸಂಗತಿಗಳಾಗಿ ಪ್ರಸ್ತುತ ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

ಲೋಕವ್ಯವಹಾರವನ್ನು ಕಾರ್ಯ-ಕಾರಣ ಸಂಬಂಧಗಳ ನೆಲೆಯಿಂದ ವಿವರಿಸಬಹುದು ಎಂಬ ಕಾರಣ ಮೀಮಾಂಸಾ ವಿಧಾನದ ಮೂಲ ಪ್ರಮೇಯವನ್ನು ಇಂದು ತಿರಸ್ಕರಿಸಲಾಗಿದೆ. ಲೋಕ ವ್ಯವಹಾರಗಳ ಹಿಂದಿನ ಕಾರಣಗಳನ್ನು ಹಿಡಿದಿಡುವುದೇ ಸಂಶೋಧನೆಯೆಂದು ಅನ್ನಿಸಿಕೊಂಡು ಬಿಟ್ಟಿದೆ. ಕಾರಣ ಮೀಮಾಂಸಾ ವಿಧಾನದಲ್ಲಿ ಲೋಕ ವ್ಯವಹಾರಕ್ಕೆ

ಸಂಬಂಧಿಸಿದ ಅನೇಕ ಸಂಗತಿಗಳನ್ನು ವಿವರಿಸಲು ಸಾಧ್ಯವಿಲ್ಲ. ಲೋಕ ವ್ಯವಹಾರವು ಒಂದು ಸೂತ್ರಕ್ಕೆ ಬದ್ಧವಾಗಿರುತ್ತದೆ ಎಂಬ ಕಾರಣ ಮೀಮಾಂಸೆಯ ನಂಬಿಕೆಯನ್ನು ಇಂದು ಪ್ರಶ್ನಿಸಲಾಗುತ್ತಿದೆ. ಬದುಕು ಸಮೀಕರಣದ ರೀತಿಯಲ್ಲಿ ಸಂಭವಿಸುವುದಿಲ್ಲ.

ಪ್ರಸ್ತುತ ಅಧ್ಯಯನದಲ್ಲಿ ಅಧ್ಯಯನ ವಸ್ತು ಮತ್ತು ಅಧ್ಯಯನ ನಡೆಸುತ್ತಿರುವ ವ್ಯಕ್ತಿ ಬೇರೆ ಬೇರೆ ಎಂಬ ಸಾಂಪ್ರದಾಯಿಕ ಅಧ್ಯಯನ ವಿಧಾನಗಳ ನಂಬಿಕೆಯನ್ನು ತಿರಸ್ಕರಿಸಲಾಗಿದೆ. ವಸ್ತು-ವ್ಯಕ್ತಿ, ಅಬ್ಜೆಕ್ಟ್-ಸಬ್ಜೆಕ್ಟ್, ವಿಷಯ-ವಿಚಾರ, ಬುದ್ಧಿ-ಭಾವನೆ ಮುಂತಾದ ಭಿನ್ನತೆಯನ್ನು ಸಾಂಪ್ರದಾಯಿಕ ವಿಧಾನದಲ್ಲಿ ಕಟ್ಟಿಕೊಳ್ಳಲಾಗುತ್ತದೆ. ಇಂತಹ ಭಿನ್ನವಾದಿ ನಂಬಿಕೆಗಳನ್ನು ತಿರಸ್ಕರಿಸಿ ಪ್ರಸ್ತುತ ಅಧ್ಯಯನವನ್ನು ಕಟ್ಟಲಾಗಿದೆ. ಎಂಪೆರಿಕಲ್ ವಿಧಾನದಿಂದ ಮಾಹಿತಿ ಸಂಗ್ರಹಣವಿಲ್ಲದ್ದರೂ ಆ ವಿಧಾನದ ಗೃಹೀತಗಳನ್ನು ಇಲ್ಲಿ ತಿರಸ್ಕರಿಸಲಾಗಿದೆ. ಇಲ್ಲಿನ ಅಧ್ಯಯನದಲ್ಲಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಯಾವ ಹಿತಾಸಕ್ತಿಗಳನ್ನು ಗ್ರಾಮೀಣ ಅಭಿವೃದ್ಧಿ ಹಾಗೂ ವಿಕೇಂದ್ರೀಕರಣ ಪ್ರತಿನಿಧಿಸುತ್ತದೆ ಎಂಬುದನ್ನು ಆರಂಭದಲ್ಲೇ ಘೋಷಿಸಲಾಗುತ್ತದೆ. ಗ್ರಾಮೀಣ ಅಭಿವೃದ್ಧಿಯೆನ್ನುವುದು ಸಮಾಜದ ಯಾವ ವರ್ಗಕ್ಕೆ ಫಲ ಒದಗಿಸಬೇಕು ಎಂಬುದನ್ನು ಮುಕ್ತವಾಗಿ ಘೋಷಿಸ ಲಾಗುತ್ತದೆ. ಇಲ್ಲಿ ಅಧ್ಯಯನ ನಡೆಸುವ ವ್ಯಕ್ತಿಯು ತನ್ನ ಅಧ್ಯಯನ ವಸ್ತುವಿನಿಂದ ಅತೀತನಾಗಿರುವುದಿಲ್ಲ. ಅಧ್ಯಯನ ನಡೆಸುವ ವ್ಯಕ್ತಿಯು ಅಧ್ಯಯನ ವಿಷಯದ ಜೊತೆ ತನ್ನನ್ನು ತಾನು ಸಮೀಕರಿಸಿ ಕೊಳ್ಳುವುದನ್ನು ಕಾಣಬಹುದಾಗಿದೆ.

ಅಧ್ಯಯನ ಮತ್ತು ಅನುಭವ - ಎರಡನ್ನೂ ಸಂಯೋಜಿಸಿ ಇಲ್ಲಿ ಅಧ್ಯಯನ ವಿಷಯದ ಜೊತೆ ಅನುಸಂಧಾನ ನಡೆಸಲು ಪ್ರಯತ್ನಿಸಲಾಗಿದೆ. ಅಧ್ಯಯನ ವಿಷಯಕ್ಕೆ ಸಂಬಂಧಪಟ್ಟ ಪರಿಭಾವನೆಗಳ ಅರ್ಥದ ನೆಲೆಗಳನ್ನು ಪರಿಶೋಧಿಸುವ ಕೆಲಸ ಮಾಡಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ವಸ್ತುನಿಷ್ಠವಾಗಿ ಮತ್ತು ಮೌಲ್ಯನಿರಪೇಕ್ಷವಾಗಿ ಇಲ್ಲಿ ಬಳಸಿಲ್ಲ. ಅವುಗಳ ಮೂಲದಲ್ಲಿರುವ ಮೌಲ್ಯಗಳನ್ನು, ಅವುಗಳ ಅರ್ಥವ್ಯಾಪ್ತಿಯನ್ನು, ಅವು ಪ್ರತಿನಿಧಿಸುವ ಹಿತಾಸಕ್ತಿಗಳನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಉದಾಹರಣೆಗೆ "ಗ್ರಾಮಸಭೆಗೆ ನಾವು ಬಂದರೆ ಮಹಿಳೆಯರು ಯಾರು ಬರುವುದಿಲ್ಲ"ವೆಂಬ ಗ್ರಾಮಪಂಚಾಯಿತಿ ಸದಸ್ಯರ ಅಭಿಪ್ರಾಯವನ್ನು ಕೇವಲ ಅಭಿಪ್ರಾಯವೆಂದು ಪರಿಗಣಿಸುವುದಕ್ಕೆ ಪ್ರತಿಯಾಗಿ ಆ ಅಭಿಪ್ರಾಯವು ಪ್ರತಿನಿಧಿಸುವ ಮೌಲ್ಯದ ಪರಿ ಯಾವುದು, ಸದರಿ ಅಭಿಪ್ರಾಯ ರೂಪುಗೊಳ್ಳಲು ಕಾರಣವಾದ ಸಾಮಾಜಿಕ-ಸಾಂಸ್ಕೃತಿಕ ಸನ್ನಿವೇಶವನ್ನು, ಆ ಅಭಿಪ್ರಾಯದ ಬಹುಮುಖಿ ಅರ್ಥವನ್ನು ಹಿಡಿದಿಡಲು ಇಲ್ಲಿ ಪ್ರಯತ್ನಿಸಲಾಗಿದೆ. ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ, ಮಾಹಿತಿ ಸಂಗ್ರಹದ ಸಂದರ್ಭದಲ್ಲಿ, ಅನೌಪಚಾರಿಕವಾಗಿ ನಡೆದ ಸಂಭಾಷಣೆ-ಸಂವಾದ-ಚರ್ಚೆಗಳಲ್ಲಿ ಅಧ್ಯಯನ ನಡೆಸುವ ವ್ಯಕ್ತಿ ಪಡೆದ ಅನುಭವವನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಕಳೆದ ಎರಡು-ಮೂರು ವರ್ಷಗಳ ಅವಧಿಯಲ್ಲಿ ಬಳ್ಳಾರಿ, ಕೊಪ್ಪಳ ಮತ್ತು ಗುಲಬರ್ಗಾ ಜಿಲ್ಲೆಗಳ ಅನೇಕ ಹಳ್ಳಿಗಳಲ್ಲಿ ಕ್ಷೇತ್ರಕಾರ್ಯವನ್ನು ನಡೆಸಲಾಗಿದೆ. ಬಳ್ಳಾರಿ ಜಿಲ್ಲೆಯ ಕೃಷ್ಣನಗರ, ದೌಲತ್ ಪುರ, ಚಿಲಕನಹಟ್ಟಿ, ಹಿರೆಹೆಗ್ಡಾಳ್, ಕೊಪ್ಪಳ ಜಿಲ್ಲೆಯ ಯರೆಹಂಚನಾಳ, ಬಿನ್ನಾಳ, ಸಿದ್ನಕೊಪ್ಪ, ಗಾಣದಾಳ್ ಮತ್ತು ಗುಲಬರ್ಗಾ ಜಿಲ್ಲೆಯ ಓಕಳಿ, ತಾಜ್‌ಸುಲ್ತಾನಪುರ, ಕಮಲಾಪುರ, ನೆಲೋಗಿ ಮುಂತಾದ ಹಳ್ಳಿಗಳಿಗೆ ಅಧ್ಯಯನದ ದೃಷ್ಟಿಯಿಂದ ಭೇಟಿ ಮಾಡಲಾಗಿದೆ. ಗ್ರಾಮ ಪಂಚಾಯತಿ ಸದಸ್ಯರು, ತಾಲ್ಲೂಕು ಪಂಚಾಯತಿ ಸದಸ್ಯರು, ಜಿಲ್ಲಾ ಪಂಚಾಯತಿ ಸದಸ್ಯರು, ಗ್ರಾಮ ಮಟ್ಟದ ಅಧಿಕಾರಿಗಳು, ಪಂಚಾಯತಿ ಕಾರ್ಯದರ್ಶಿಗಳು, ರೈತರು, ಉಪಾಧ್ಯಾಯರು, ಅಂಗನವಾಡಿ ಕಾರ್ಯಕರ್ತೆಯರು, ಎಎನ್‌ಎಮ್ ಮುಂತಾದವರ ಜೊತೆ ಚರ್ಚೆ-ಸಂವಾದ ಮಾಡಲಾಗಿದೆ. ಈ ಎಲ್ಲ ಸಂಗತಿಗಳನ್ನು ಇಲ್ಲಿನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೧.೪. ಅಧ್ಯಾಯಗಳ ವಿನ್ಯಾಸ**

ಈ ಸಂಶೋಧನ ವರದಿಯಲ್ಲಿ ಒಟ್ಟು ಐದು ಅಧ್ಯಾಯಗಳಿವೆ. ಮೊದಲನೆಯ 'ಪ್ರಸ್ತಾವನೆ' ಅಧ್ಯಾಯದಲ್ಲಿ ಸಂಶೋಧನಾ ವರದಿಯ ವಿಷಯ ವಸ್ತುವನ್ನು ಕುರಿತ ಚರ್ಚೆಯಿದೆ. ಸಂಶೋಧನಾ ವಿಷಯ ವಸ್ತುವನ್ನು ಅಧ್ಯಯನದ ಸಮಸ್ಯೆಯನ್ನಾಗಿ ಹೇಗೆ ರೂಪಿಸಿಕೊಳ್ಳಲಾಗಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಅಧ್ಯಯನದ ಉದ್ದೇಶಗಳು ಮತ್ತು ಅಧ್ಯಯನ ವಿಧಾನಗಳನ್ನು ಕುರಿತ ಭಾಗಗಳು ಮೊದಲನೆಯ ಅಧ್ಯಾಯದ ಇನ್ನೆರಡು ಉಪಶೀರ್ಷಿಕೆಗಳಾಗಿವೆ.

ಎರಡನೆಯ ಅಧ್ಯಾಯದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ವಿಕೇಂದ್ರೀಕರಣ ವ್ಯವಸ್ಥೆ ನಡೆದು ಬಂದ ದಾರಿಯನ್ನು ಚಾರಿತ್ರಿಕವಾಗಿ ಗುರುತಿಸಲು ಪ್ರಯತ್ನಿಸಲಾಗಿದೆ. ಹಾಗೆಯೇ ಗ್ರಾಮೀಣ ಅಭಿವೃದ್ಧಿಯನ್ನು ಕುರಿತಂತೆ ಒಂದು ಚಾರಿತ್ರಿಕ ವಿವರವನ್ನು ಮಂಡಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಮೂರನೆಯ ಅಧ್ಯಾಯನವು ಪ್ರಸ್ತುತ ಸಂಶೋಧನಾ ವರದಿಯ ಸಾರಸತ್ವ ಭಾಗವಾಗಿದೆ. ಇದರಲ್ಲಿ ಪ್ರಸ್ತಾವನೆಯನ್ನು ಬಿಟ್ಟು ನಾಲ್ಕು ಉಪಭಾಗಗಳಿವೆ. ಮೊದಲನೆಯ ಉಪಭಾಗದಲ್ಲಿ ಗ್ರಾಮಪಂಚಾಯಿತಿಗಳ ಚುನಾಯಿತ ಸದಸ್ಯರ ಉದ್ಯೋಗ, ಭೂಮಾಲಿಕತ್ವ ಮುಂತಾದ ವಿವರಗಳನ್ನು ಹಿಡಿದಿಡಲಾಗಿದೆ. ಜನರ ಪ್ರಾತಿನಿಧ್ಯಕ್ಕೂ ಮತ್ತು ಗ್ರಾಮೀಣ ಪ್ರದೇಶದ ಜಾತಿ ಸ್ವರೂಪಕ್ಕೂ ನಡುವಿನ ಸಂಬಂಧವನ್ನು ಕುರಿತಂತೆ ಚರ್ಚಿಸಲಾಗಿದೆ. ಎರಡನೆಯ ಭಾಗದಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಹೇಗೆ ಜನರನ್ನು ತಲುಪುತ್ತಿವೆ, ಅವುಗಳ ಅಸಮಹಂಚಿಕೆಯ ಸ್ವರೂಪವನ್ನು ಇಲ್ಲಿ ಚರ್ಚಿಸಲಾಗಿದೆ. ಮೂರನೆಯ ಭಾಗದಲ್ಲಿ ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಮಹಿಳೆಯರ ಸ್ಥಾನಮಾನ ಹಾಗೂ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ. ಕೊನೆಯ ಭಾಗದಲ್ಲಿ ವಿಕೇಂದ್ರೀಕರಣ

ಮತ್ತು ಗ್ರಾಮೀಣ ಅಭಿವೃದ್ಧಿಗಳ ಪ್ರಜಾಪ್ರಭುತ್ವ ಸ್ವರೂಪವನ್ನು ಕುರಿತ ಚರ್ಚೆಯಿದೆ.

ಪ್ರಸ್ತುತ ವರದಿಯ ನಾಲ್ಕನೆಯ ಅಧ್ಯಾಯದಲ್ಲಿ ವಿಕೇಂದ್ರೀಕರಣ ಹಾಗೂ ಗ್ರಾಮೀಣ ಅಭಿವೃದ್ಧಿಗಳು ಹೇಗೆ ನಿರೀಕ್ಷಿತ ಪರಿಣಾಮ ಬೀರುವಲ್ಲಿ ವಿಫಲವಾಗಿವೆ ಎಂಬುದನ್ನು ರಾಜಕೀಯ ನೆಲೆಯಲ್ಲಿ ಹಿಡಿದಿಡಲಾಗಿದೆ. ರಾಜಕೀಯ ಪಕ್ಷಗಳು-ರಾಜಕಾರಣ ಹೇಗೆ ತನ್ನ ಜವಾಬ್ದಾರಿ ನಿರ್ವಹಿಸಲು ವಿಫಲವಾಗಿದ್ದಾವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಇಡೀ ಸಂಶೋಧನ ವರದಿಯ ಮುಖ್ಯ ತಥ್ಯಗಳನ್ನು ಸಾರಾಂಶ ರೂಪದಲ್ಲಿ ನೀಡಲಾಗಿದೆ. ಪ್ರತಿಯೊಂದು ಅಧ್ಯಾಯಕ್ಕೂ ಅಡಿಟಿಪ್ಪಣಿಗಳನ್ನು ಪ್ರತ್ಯೇಕವಾಗಿ ನೀಡಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದ ವಿವರವಾದ ಆಕರಸೂಚಿಯನ್ನು ವರದಿಯ ಕೊನೆಯ ಭಾಗದಲ್ಲಿ ನೀಡಲಾಗಿದೆ.

**ಟಿಪ್ಪಣಿಗಳು**

೧. ಜನ್ ಬ್ರೆಮನ್ ಮತ್ತು ಇತರರು ಕೂಡಿ ಸಂಪಾದಿಸಿರುವ 'ದಿ ವಿಲೇಜ್ ಇನ್ ಏಷ್ಯಾ ರಿವಿಜಿಟೆಂಡ್' ಎಂಬ ಸಂಕಲನ ತುಂಬಾ ಮಹತ್ವವಾದುದು. ಗ್ರಾಮೀಣ ಅಧ್ಯಯನಗಳಲ್ಲಿ ಆಸಕ್ತಿಯಿರುವವರು ಗಮನಿಸಲೇ ಬೇಕಾದ ಗ್ರಂಥ ಇದು. ಈ ಗ್ರಂಥದಲ್ಲಿ ಸಂಕಲನಗೊಂಡಿರುವ ಜನ್ ಬ್ರೆಮನ್ ರವರ 'ದಿ ವಿಲೇಜ್ ಇನ್ ಪೋಕಸ್' ಎಂಬ ಪ್ರಬಂಧದಲ್ಲಿ ಗ್ರಾಮಗಳನ್ನು ೧೮೦೦ ರಿಂದ ಇಲ್ಲಿಯವರೆಗೆ ಹೇಗೆ ಪರಿಭಾವಿಸಿಕೊಂಡು ಬರಲಾಗಿದೆ ಎಂಬುದನ್ನು ವಿವರವಾಗಿ ಚರ್ಚಿಸಲಾಗಿದೆ. ಅವರ ವರ್ಗೀಕರಣವು ಚಾರಿತ್ರಿಕವಾಗಿ ಕಾಲಾವಧಿ ಅನುಕ್ರಮಣಿಕೆಯಲ್ಲ. ಉದಾಹರಣೆಗೆ ಮಾನವಶಾಸ್ತ್ರದ ವಸ್ತುವಾಗಿ ಗ್ರಾಮವೆನ್ನುವುದು ಸ್ವಾತಂತ್ರ್ಯಪೂರ್ವ ದಿಂದಲೇ ಅಧ್ಯಯನ ವಸ್ತುವಾಗಿದೆ. ಅಭಿವೃದ್ಧೀಕರಣಗೊಂಡ ಗ್ರಾಮವೆಂಬುದನ್ನು ಭಾರತೀಯ ಕೆಲವು ರಾಜ ಸಂಸ್ಥಾನಗಳು ಸ್ವಾತಂತ್ರ್ಯ ಪೂರ್ವದಲ್ಲೇ ಪ್ರಯೋಗ ಮಾಡಿದ್ದನ್ನು ನಾವು ಮರೆಯುವಂತಿಲ್ಲ.

೨. ಬ್ರಿಟಿಷ್ ಅಧಿಕಾರಿಯಾಗಿದ್ದ ಸರ್ ಚಾರ್ಲ್ಸ್‌ಮೆಟ್ ಕಾಫ್ ರೂಪಿಸಿದ ಒಂದು ಪರಿಭಾವನೆಯೆಂದರೆ 'Village Republics'. ಈ ಬಗ್ಗೆ ಅವನ ವಿವರಣೆ ಹೀಗಿದೆ.

" The village communities are little republics, having nearly every thing they want with in themselves and almost independent of any foreign relations. They seem to last when nothing else lasts. Dynasty after dynasty tumbles down, revolution succeeds revolutions: Hindu, Pathan, Mogal, Marata, Sikh, English all are masters in turn, but the village communities remain the same.......This union of the village communities each one forming a little state in itself, has I conceive, contributed more than any other cause to the preservation of the people of India, through all the revolutions and changes which they

have suffered, and is in a high degree conducive to their happiness and to the enjoyment of a great portion of freedom and independence". Quated by B.R.Ambedkar in his 'Outside the Fold' in Valerian Rodrigus(Ed) 2002.

ಜಾನ್ ಬ್ರೆಮನ್‌ರವರು ವರ್ಗಕ್ಕೆ ಪ್ರತಿಯಾಗಿ ಜಾತಿಯೆ ನಮ್ಮ ಗ್ರಾಮಗಳ ಮುಖ್ಯಲಕ್ಷಣ ಎಂಬ ವಿಚಾರ ಮಂಡಿಸಿದ್ದಾರೆ. ಅವರ ಮಾತುಗಳು ಹೀಗಿವೆ.

" It would be a mistake, however, to assume that people perceive their identity always in terms of class and not any longer in terms of caste, as in rural India or in terms of social catergories built around persistent ethnic or religous loyalties in various other Asian socieities"(P.64)

ಗಾಂಧೀಜಿ ಅವರ ಕನಸಿನ ಗ್ರಾಮದ ಚಿತ್ರ ಹೀಗಿದೆ.

" My idea of village swaraj is that it is a complete republic independent of its neighbour for its own vital wants and yet interdepedent for many others in which dependence is a necessity. The government of the village will be conducted by Panchayat of five persons annually elected by adult villagers, males and females, possessing minimum prescribed qualifications. These will have all the authority and jurisdiction required" Quoted in George Matheew, 1994, P.5.

೩. ಜನಗಣತಿಯಲ್ಲಿ ನಗರ ಪ್ರದೇಶವನ್ನು ಹೀಗೆ ನಿರ್ವಚಿಸಲಾಗಿದೆ.

೧. ಪುರಸಭೆ, ನಗರಸಭೆ, ಮಹಾನಗರ ಪಾಲಿಕೆ, ಕಂಟೋನ್ಮೆಂಟ್ ಮತ್ತು ಅನುಸೂಚಿತ ಪ್ರದೇಶಗಳು ನಗರ ಪ್ರದೇಶವೆನಿಸಿಕೊಳ್ಳುತ್ತವೆ.

೨. ಯಾವ ವಸತಿ ಪ್ರದೇಶದ ಜನಸಂಖ್ಯೆ ೫೦೦೦ ಮೀರಿರುತ್ತದೋ ಮತ್ತು

೩. ಅಲ್ಲಿ ಪುರುಷ ಪ್ರಧಾನ ದುಡಿಮೆಗಾರರಲ್ಲಿ ಶೇ.೭೫ರಷ್ಟು ಕೃಷಿಯೇತರ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೋ ಹಾಗೂ ಅಲ್ಲಿ ಜನಸಾಂದ್ರತೆ ೪೦೦ಕ್ಕಿಂತ ಅಧಿಕವಾಗಿರುತ್ತದೋ ಅದು ನಗರಪ್ರದೇಶ. (ಜನಗಣತಿ ವರದಿ ೨೦೦೧)

೪. ಜಾರ್ಜ್‌ಮಾಥ್ಯೂ ೧೯೯೪, ಪು. ಇಲ್ಲಿ ಉದ್ಧೃತ

೫. ವಲೇರಿಯನ್ ರೋಡ್ರಿಗಸ್ (ಸಂ) ೨೦೦೨ ಇಲ್ಲಿ ಉದ್ಧೃತ.

೬. ಕತಾರ್ ಸಿಂಗ್‌ರವರು ನೀತಿ ಮತ್ತು ಕಾರ್ಯಕ್ರಮಗಳಲ್ಲಿ ಭಿನ್ನತೆಯನ್ನು ಹೀಗೆ ಗುರುತಿಸುತ್ತಾರೆ. ಪಾಲಿಸಿ- ನೀತಿ: ಉದ್ದೇಶಿತ ಕಾರ್ಯಚಟುವಟಿಕೆಗಳ ಒಂದು ಪಟ್ಟಿ, ಕಾರ್ಯಕ್ರಮ: ನಿರ್ದಿಷ್ಟ ಸ್ಥಳದಲ್ಲಿ, ನಿರ್ದಿಷ್ಟ ಪರಿಸರ ಜನರು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಅನುಷ್ಠಾನಗೊಳಿಸುವ ಪರಿ. ಗ್ರಾಮೀಣ ಕುರಿತಂತೆ ನೀತಿಯಿದೆಯೆ-ಇಲ್ಲವೆ ಎಂಬುದರ ಬಗ್ಗೆ ಅವರು ಹೀಗೆ ಬರೆಯುತ್ತಾರೆ.

"Sadly, even after 50 years of independence, India does not have a unifield national policy for agriculture and rural develoment (1999:121)

೭. ಇಲ್ಲಿ ನಾವು ರಾಷ್ಟ್ರೀಯ ಯೋಜನಾ ಆಯೋಗ ಮತ್ತು ಜಿಲ್ಲಾ ಯೋಜನಾ ಸಮಿತಿಗಳ ನಡುವಿನ ಭಿನ್ನತೆಗಳನ್ನು ಅಗತ್ಯವಾಗಿ ಗುರುತಿಸಬೇಕು. ಮೊದಲನೆಯದಾಗಿ ರಾಷ್ಟ್ರೀಯ ಯೋಜನಾ ಆಯೋಗವು ಒಂದು ರಾಜಕೀಯ ಸಂಸ್ಥೆ. ಆದರೆ ಜಿಲ್ಲಾ ಯೋಜನಾ ಸಮಿತಿಯು ಸಂವಿಧಾನಾತ್ಮಕ ಸಂಸ್ಥೆ. ಎರಡನೆಯದಾಗಿ ರಾಷ್ಟ್ರೀಯ ಯೋಜನಾ ಆಯೋಗದ ಸದಸ್ಯರು ಸರ್ಕಾರದಿಂದ ನಾಮಕರಣ ಗೊಂಡಿರುತ್ತಾರೆ. ಆದರೆ ಜಿಲ್ಲಾ ಯೋಜನಾ ಸಮಿತಿಯ ಸದಸ್ಯರು ಚುನಾಯಿತ ಜನಪ್ರತಿನಿಧಿಗಳಾಗಿರುತ್ತಾರೆ. ಸಂವಿಧಾನಾತ್ಮಕ ಹಾಗೂ ಜನಪ್ರತಿನಿಧಿ ಸಂಸ್ಥೆಗಿಂತ ರಾಜಕೀಯ ಸೃಷ್ಟಿಯಾದ ಸಂಸ್ಥೆಯೇ ಹೆಚ್ಚಿನ ಪ್ರಭಾವ ಮತ್ತು ಅಧಿಕಾರ ಹೊಂದಿರುವುದು ಕುತೂಹಲದ ಸಂಗತಿಯಾಗಿದೆ. ಇನ್ನಾದರೂ ನಾವು ಜಿಲ್ಲಾ ಯೋಜನಾ ಸಮಿತಿಗಳನ್ನು ಬಲಪಡಿಸುವ ಬಗ್ಗೆ ಯೋಚಿಸಬೇಕಾಗಿದೆ.

೮. ಈ ಬಗ್ಗೆ ಜೀನ್‌ಡ್ರೀಜ್ ಮತ್ತು ಅಮರ್ತ್ಯಸೆನ್ (೨೦೦೨:೩೫೦) ರವರ ಹೇಳಿಕೆಯನ್ನು ಗಮನಿಸಬಹುದಾಗಿದೆ.

"The performance of democratic institutions is contingent on a wide range of social conditions from edcuational levels and political traditions to the nature of social inequalities and popular organisations". ಇಲ್ಲಿ ಅವರು ಯಾವುದನ್ನು ಪ್ರಜಾಪ್ರಭುತ್ವದ ಬಗ್ಗೆ ಹೇಳಿದ್ದಾರೋ ಅದೇ ಸಂಗತಿಗಳನ್ನು ಅಭಿವೃದ್ಧಿ- ವಿಕೇಂದ್ರೀಕರಣ-ಪಂಚಾಯತ್ ರಾಜ್ ಸಂಸ್ಥೆಗಳ ಬಗ್ಗೆಯೂ ಹೇಳಬಹುದು.

೯. ಅಮರ್ತ್ಯಸೆನ್/ಜೀನ್‌ಡ್ರೀಜ್ (೨೦೦೨:೩೫೦) ಅವರು ಅನೂಚಾನವಾಗಿ ಹರಿದುಕೊಂಡು ಬಂದಿರುವ ಸಾಮಾಜಿಕ ಅಸಮಾನತೆಗಳು ಎಂದು ಯಾವುದನ್ನು ಕರೆದಿದ್ದಾರೋ ಅದನ್ನೇ ಜನ ಬ್ರೆಮನ್ ಆರೋಹಣವಾದಿ ಅಸಮಾನತೆಯೆಂದು ಕರೆದಿದ್ದಾರೆ(೧೯೯೭:೫೭) ಮತ್ತು ಜೀನ್‌ಡ್ರೀಜ್ ಅದನ್ನು ಬೇಸ್‌ಲೈನ್ ಅಸಮಾನತೆಯೆಂದು ಕರೆದಿದ್ದಾರೆ(೧೯೯೭:೧೭೦).

೧೦. ವಿಲ್‌ಹೆಲ್ಮ್ ಡಿಲ್ಥೆ ಅವರು ತಮ್ಮ 'ಹ್ಯೂಮನ್ ಸೈನ್ಸ್' ಪ್ರಬಂಧದಲ್ಲಿ ವಸ್ತುನಿಷ್ಟತೆಯು ಸಾಧ್ಯವಿಲ್ಲ ಎಂಬ ವಿಚಾರದ ಬಗ್ಗೆ ಹೀಗೆ ಹೇಳಿದ್ದಾರೆ.

" The direct relationship between life and human studies leads, in the latter, to a conflict between the tendencies of life and the goal of science. Because historians, economists, teachers of law and students of religions are involved in life they want to influence it.

They subject historical personages, mass movements and trends to their judgement which is conditioned by their individuality, the nation to which they belong, and the age in which they live. Even when they think that they are being objective, they are determined by their horizen, for every analysis of the concepts of a former generation reveals consitutents in them which derive from the presuppositions of that generation"(P.36)



೨

# ವಿಕೇಂದ್ರೀಕರಣ ಪ್ರಯೋಗ-ಗ್ರಾಮೀಣ ಅಭಿವೃದ್ಧಿ: ಕರ್ನಾಟಕದ ಅನುಭವಗಳು

೨.೧. ಪ್ರಸ್ತುತ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಕರ್ನಾಟಕದಲ್ಲಿ ವಿಕೇಂದ್ರೀಕರಣ ವ್ಯವಸ್ಥೆ ನಡೆದುಬಂದ ಪರಿಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಈ ವಿಷಯವು ನಮ್ಮ ಅಧ್ಯಯನಕ್ಕೆ ಒಂದು ಹಿನ್ನೆಲೆಯನ್ನು ಒದಗಿಸುತ್ತದೆ ಎಂದು ನಂಬಲಾಗಿದೆ. ಅನೇಕ ಅಧ್ಯಯನಗಳು ಕರ್ನಾಟಕಕ್ಕೆ ಸಂಬಂಧಿಸಿದಂತೆ ವಿಕೇಂದ್ರೀಕರಣದ ಇತಿಹಾಸವನ್ನು ಸ್ವಾತಂತ್ರ್ಯ ಪೂರ್ವಕ್ಕೆ ಒಯ್ಯುವ ಪ್ರಯತ್ನ ನಡೆಸಿವೆ.(ಅಬ್ದುಲ್ ಅಜೀಜ್, ೨೦೦೦, ಎನ್.ಶಿವಣ್ಣ, ೨೦೦೧: ೨೬೫)[೧]

ಇಲ್ಲಿ ಚರ್ಚೆಯನ್ನು ಕೇವಲ ಸ್ವಾತಂತ್ರ್ಯಾನಂತರದ ಕಾಲಾವಧಿಗೆ ಮೀಸಲಿಟ್ಟುಕೊಳ್ಳಲಾಗಿದೆ. ಸ್ವಾತಂತ್ರ್ಯಾನಂತರ ವಿಕೇಂದ್ರೀಕರಣ ವ್ಯವಸ್ಥೆಗೆ ಬಲವಂತ ರಾಯ್ ಜಿ.ಮೆಹತಾ ಸಮಿತಿಯ ವರದಿಯು ಚಾಲನೆ ನೀಡಿತು. 'ಸಾಮುದಾಯಿಕ ಅಭಿವೃದ್ಧಿ ಕಾರ್ಯಕ್ರಮಗಳು ಜನರ ಸಹಭಾಗಿತ್ವವಾದಿ ಕಾರ್ಯಕ್ರಮಗಳಾಗಲು ತಳಮಟ್ಟದಲ್ಲಿ ಶಾಸನಾತ್ಮಕ ಜನಪ್ರತಿನಿಧಿ ಸಂಸ್ಥೆಗಳನ್ನು ಸಂಘಟಿಸಬೇಕಾಗುತ್ತದೆ' ಎಂಬ ಬಲವಂತರಾಯ್ ಜಿ.ಮೆಹತಾ ನೇತೃತ್ವದ ಕಾರ್ಯಪಡೆ ನೀಡಿದ ಶಿಫಾರಸ್ಸು ವಿಕೇಂದ್ರೀಕರಣ ವ್ಯವಸ್ಥೆ ರೂಪುಗೊಳ್ಳಲು ಕಾರಣವಾಯಿತು. (ಜಾರ್ಜ್‌ಮ್ಯಾಥ್ಯೂ, ೧೯೯೪ : ೮) ರಾಷ್ಟ್ರಮಟ್ಟದಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯ ವಿಕಾಸ ಕುರಿತಂತೆ ಮೂರು ಹಂತಗಳನ್ನು ಗುರುತಿಸಲಾಗುತ್ತದೆ.[೨]

೧. ಮೊದಲ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು : ೧೯೫೯-೧೯೭೭

೨. ಎರಡನೆಯ ತಲೆ ಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು : ೧೯೭೭-೧೯೯೩

೩. ಮೂರನೆಯ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು : ೧೯೯೩ರ ನಂತರ.

ಮೊದಲ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು ಕೇವಲ ನಾಮ ಮಾತ್ರವಾಗಿದ್ದವು. ಅವುಗಳಿಗೆ ಯಾವ ರಾಜ್ಯವೂ ಕಾಲಕ್ಕೆ ಸರಿಯಾಗಿ ಚುನಾವಣೆ ನಡೆಸಲಿಲ್ಲ. ಮುಂದೆ ೧೯೭೭ರಲ್ಲಿ ನೇಮಕವಾದ ಅಶೋಕ ಮೆಹತಾ ಸಮಿತಿಯ ವರದಿಯು ಎರಡನೆಯ

ತಲೆಮಾರಿನ ಪಂಚಾಯತ್ ರಾಜ್ ಸಂಸ್ಥೆಗಳ ಹುಟ್ಟಿಗೆ ಕಾರಣವಾಯಿತು. ಈ ದಿಶೆಯಲ್ಲಿ ಪಶ್ಚಿಮಬಂಗಾಳ ಮತ್ತು ಕರ್ನಾಟಕ ರಾಜ್ಯಗಳು ದಿಟ್ಟ ಹೆಜ್ಜೆಗಳನಿಟ್ಟವು.

ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಸ್ವಾತಂತ್ರ್ಯಾನಂತರ ೧೯೫೯ರಲ್ಲಿ ಸರ್ಕಾರವು 'ಕರ್ನಾಟಕ ಗ್ರಾಮಪಂಚಾಯಿತಿಗಳು ಮತ್ತು ಸ್ಥಳೀಯ ಸಂಸ್ಥೆಗಳ ಕಾಯಿದೆ'ಯನ್ನು ಜಾರಿಗೊಳಿಸಿ ಪಂಚಾಯತ್‌ರಾಜ್ ಸಂಸ್ಥೆಗಳ ಹುಟ್ಟಿಗೆ ನಾಂದಿ ಹಾಡಿತು. ಹೀಗೆ ಅಸ್ತಿತ್ವಕ್ಕೆ ಬಂದ ಮೊದಲ ತಲೆಮಾರಿನ ಪಂಚಾಯಿತಿಗಳು ಗ್ರಾಮೀಣ ಸ್ವಯಂಮಾಡಳಿತ ಸಂಸ್ಥೆಗಳಾಗಿ ರೂಪುಗೊಳ್ಳಲು ಸಾಧ್ಯವಾಗಲಿಲ್ಲ. ಈ ಹಂತದ ವಿಕೇಂದ್ರೀಕರಣಕ್ಕೆ ಸಂಬಂಧಿಸಿದ ಪ್ರಯೋಗವನ್ನು ಡಿ.ಎಂ.ನಂಜುಂಡಪ್ಪನವರು(೧೯೯೬) 'ನೌಕರಶಾಹಿ ಪ್ರಧಾನ ನಾಮಮಾತ್ರ ಪಂಚಾಯತ್‌ರಾಜ್ ವ್ಯವಸ್ಥೆ'ಯೆಂದು ವರ್ಣಿಸಿದ್ದಾರೆ.

"ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಸಮಿತಿ, ಮಂಡಳ ಪಂಚಾಯತ್ ಮತ್ತು ನ್ಯಾಯಪಂಚಾಯಿತಿ ಕಾಯಿದೆ ೧೯೮೩" ಜಾರಿಗೆ ಬಂದ ಮೇಲೆ(೧೯೮೫) ಎರಡನೆಯ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಪಶ್ಚಿಮ ಬಂಗಾಳದ ನಂತರ ಎರಡನೆಯ ತಲೆಮಾರಿನ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತಂದ ಎರಡನೆಯ ರಾಜ್ಯ ಕರ್ನಾಟಕ. ಇದರ ಮುಖ್ಯ ಲಕ್ಷಣಗಳನ್ನು ಕೆಳಗೆ ನೀಡಲಾಗಿದೆ.

೧. ಈ ಕಾಯಿದೆ ಜಾರಿಗೆ ಬಂದ ಮೇಲೆ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳು ಸಹಜವಾಗಿ ರದ್ದಾದವು. ಜಿಲ್ಲಾ ಅಭಿವೃದ್ಧಿ ಯೋಜನೆ ಮತ್ತು ಜಿಲ್ಲಾ ಮಟ್ಟದ ಎಲ್ಲ ಅಭಿವೃದ್ಧಿ ಇಲಾಖೆಗಳೂ ಈಗ ಜಿಲ್ಲಾ ಪರಿಷತ್ತಿನ ವ್ಯಾಪ್ತಿಗೆ ಬಂದವು. ಜಿಲ್ಲಾ ಪರಿಷತ್ತು ಜಿಲ್ಲಾ ಮಟ್ಟದ ಸರ್ಕಾರವಾಗಿ ರೂಪತಳೆಯಿತು.
೨. ವಿಕೇಂದ್ರೀಕರಣದ ಪ್ರಥಮ ಹಂತದಲ್ಲಿ ಅಧಿಕಾರ ರಾಜ್ಯಮಟ್ಟದಿಂದ ಜಿಲ್ಲಾ ಮಟ್ಟಕ್ಕೆ ಹರಿದು ಬರುವಂತಾಯಿತು.
೩. ಜಿಲ್ಲಾ ಪರಿಷತ್ತು ಒಂದು ಚುನಾಯಿತ ಸಂಸ್ಥೆಯಾಗಿರುತ್ತದೆ.
೪. ಜಿಲ್ಲಾ ಪರಿಷತ್ತಿನ ಕೆಳಗೆ ಗ್ರಾಮಮಟ್ಟದಲ್ಲಿ 'ಮಂಡಳ ಪಂಚಾಯತಿ' ಎಂಬ ಸಂಸ್ಥೆಯನ್ನು ರೂಪಿಸಲಾಯಿತು. ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯಿತಿಗಳ ಮಧ್ಯ ಒಂದು ಸಲಹಾ ಮಂಡಳಿಯಾಗಿ ಕೆಲಸ ಮಾಡಲು ತಾಲ್ಲೂಕು ಪಂಚಾಯತ್ ಸಮಿತಿಯನ್ನು ರೂಪಿಸಲಾಯಿತು.

ವಿಕೇಂದ್ರೀಕರಣ ವ್ಯವಸ್ಥೆ ಕುರಿತಂತೆ ಇದೊಂದು ಕ್ರಾಂತಿಕಾರಕ ಕ್ರಮವಾಗಿತ್ತು. ಕರ್ನಾಟಕದ ಪ್ರಯೋಗವು ರಾಷ್ಟ್ರಾದ್ಯಂತ ಆಸಕ್ತಿಯನ್ನು ಕೆರಳಿಸಿತು. ಹೊಸ ಕಾಯಿದೆ ಯಡಿಯಲ್ಲಿ ಜಿಲ್ಲಾ ಪರಿಷತ್ತುಗಳಿಗೆ ಜನವರಿ ೨, ೧೯೮೭ರಲ್ಲಿ ಮತ್ತು ಮಂಡಲ ಪಂಚಾಯತಿಗಳಿಗೆ ಜನವರಿ ೨೦ ೧೯೮೭ರಲ್ಲಿ ಚುನಾವಣೆಗಳು ನಡೆದವು. 'ಜನರಿಗೆ ಅಧಿಕಾರ' ಎಂಬ ಘೋಷಣೆ ಆಧಾರದಲ್ಲಿ ಚುನಾವಣೆ ನಡೆಸಲಾಯಿತು. ಈ ಕ್ರಮದಿಂದಾಗಿ ಅಧಿಕಾರವು ಜಿಲ್ಲಾ ಮಟ್ಟದಿಂದ ಗ್ರಾಮಮಟ್ಟಕ್ಕೆ ಹರಿಯುವುದು ಸಾಧ್ಯವಾಯಿತು. ಜಿಲ್ಲಾ

ಅಭಿವೃದ್ಧಿ ಯೋಜನೆಯನ್ನು ರೂಪಿಸುವುದು ಜಿಲ್ಲಾ ಪರಿಷತ್ತಿನ ಒಂದು ಮುಖ್ಯ ಕಾರ್ಯವಾಯಿತು. ಮಂಡಲ ಪಂಚಾಯಿತಿಗಳು ತಮ್ಮ ವ್ಯಾಪ್ತಿಯ ಪ್ರದೇಶಕ್ಕೆ ಸಂಬಂಧಿಸಿದಂತೆ ಅಭಿವೃದ್ಧಿ ಯೋಜನೆ ರೂಪಿಸಬೇಕಾಗಿತ್ತು.

ಈ ಪ್ರಯೋಗ ಒಂದು ಚುನಾವಣಾ ಅವಧಿಗೆ ಮುಗಿದುಹೋಯಿತು.(೧೯೮೭-೧೯೯೨) ಸಂವಿಧಾನಕ್ಕೆ ೭೩ನೆಯ ಮತ್ತು ೭೪ನೆಯ ತಿದ್ದುಪಡಿ ಮಾಡಿದರ ಪರಿಣಾಮವಾಗಿ ಮೂರನೆಯ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು ಹುಟ್ಟಿಕೊಂಡವು. ಸಂವಿಧಾನದ ೭೩-೭೪ನೆಯ ತಿದ್ದುಪಡಿಗಳು ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗೆ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಮನ್ನಣೆ ದೊರಕಿಸಿಕೊಟ್ಟವು. ರಾಷ್ಟ್ರಮಟ್ಟದಲ್ಲಿ ಉಂಟಾದ ಬೆಳವಣಿಗೆಗೆ ಅನುಗುಣವಾಗಿ ಕರ್ನಾಟಕ ಸರ್ಕಾರವು 'ಕರ್ನಾಟಕ ಪಂಚಾಯತ್‌ರಾಜ್ ಕಾಯಿದೆ-೧೯೯೩' ಎಂಬ ಕಾಯಿದೆಯಡಿಯಲ್ಲಿ ಹೊಸ ಮೂರು ಹಂತದ ವಿಕೇಂದ್ರೀಕರಣ ವ್ಯವಸ್ಥೆಯನ್ನು ಜಾರಿಗೆ ತಂದಿತು. ಹಿಂದಿನ ಜಿಲ್ಲಾಪರಿಷತ್ತು ಮತ್ತು ಮಂಡಳ ಪಂಚಾಯಿತಿ ಎಂಬ ಎರಡು ಹಂತದ ವಿಕೇಂದ್ರೀಕರಣ ವ್ಯವಸ್ಥೆಗೆ ಪ್ರತಿಯಾಗಿ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮಪಂಚಾಯಿತಿ ಎಂಬ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದಿತು (ನೋಡಿ ಚಿತ್ರ ೧).

**೨.೨. ಗ್ರಾಮೀಣ ಅಭಿವೃದ್ಧಿ - ನಡೆದುಬಂದ ಬಗೆ**

ಗ್ರಾಮೀಣ ಅಭಿವೃದ್ಧಿ ಪ್ರಕ್ರಿಯೆಯನ್ನು ತಳಮಟ್ಟಕ್ಕೆ ಒಯ್ಯುವ ದಿಶೆಯಲ್ಲಿ ಕರ್ನಾಟಕವು ಬಹಳ ಹಿಂದಿನಿಂದಲೂ ಮಹತ್ವದ ಕೆಲಸಗಳನ್ನು ಮಾಡಿಕೊಂಡು ಬಂದಿದೆ. ಗ್ರಾಮೀಣ ಅಭಿವೃದ್ಧಿ ಪ್ರಕ್ರಿಯೆಯ ವಿಕೇಂದ್ರೀಕರಣವು ಎರಡು ಸಂಗತಿಗಳನ್ನು ಒಳಗೊಂಡಿದೆ. ಮೊದಲನೆಯದು ಅಭಿವೃದ್ಧಿ ಪ್ರಕ್ರಿಯೆಯನ್ನು ನೌಕರಶಾಹಿಯ ಕಪಿಮುಷ್ಟಿಯಿಂದ ಬಿಡುಗಡೆಗೊಳಿಸಿ, ಇಡೀ ಅಭಿವೃದ್ಧಿಯೋಜನೆ ರೂಪಿಸುವುದು, ಅನುಷ್ಠಾನಗೊಳಿಸುವುದು ಮುಂತಾದವನ್ನು ಜನಪ್ರತಿನಿಧಿ ಸಂಸ್ಥೆಗಳಿಗೆ ವಹಿಸಿಕೊಡುವುದು. ಎರಡನೆಯದು ಅಭಿವೃದ್ಧಿ ಪ್ರಕ್ರಿಯೆಯನ್ನು ರಾಜ್ಯಮಟ್ಟದಿಂದ ಜಿಲ್ಲಾಮಟ್ಟಕ್ಕೆ, ಜಿಲ್ಲಾಮಟ್ಟದಿಂದ ತಾಲ್ಲೂಕುಮಟ್ಟಕ್ಕೆ ಮತ್ತು ತಾಲ್ಲೂಕು ಮಟ್ಟದಿಂದ ಗ್ರಾಮಮಟ್ಟಕ್ಕೆ ಒಯ್ಯುವುದು. ಮೊದಲನೆಯ ವಿಷಯಕ್ಕೆ ಸಂಬಂದಿಸಿದಂತೆ ಕರ್ನಾಟಕವು ಮಹತ್ವದ ಸಾಧನೆಯನ್ನು ಸಾಧಿಸಿಕೊಂಡಿದೆ. ಈ ಪ್ರಕ್ರಿಯೆಯು ಒಳಗೊಂಡಿರುವ ಬಹುಮುಖ್ಯ ಸೈದ್ಧಾಂತಿಕ ಸಂಗತಿಯೆಂದರೆ ಜನರು, ಅದರಲ್ಲೂ ಗ್ರಾಮೀಣವಾಸಿಗಳು ಅಭಿವೃದ್ಧಿಯ 'ಸಾಧನ'ವೂ ಮತ್ತು 'ಸಾಧ್ಯ'ವೂ ಆಗುವುದಾಗಿದೆ. ಗ್ರಾಮೀಣ ವಾಸಿಗಳು ಅಭಿವೃದ್ಧಿಯ ಫಲಾನುಭವಿಗಳು ಹೌದು ಮತ್ತು ಅದರ ಕರ್ತೃಗಳೂ ಹೌದು.[೩] ಈ ಬಗೆಯ ಪರಿವರ್ತನೆ ನಮ್ಮ ರಾಜ್ಯದಲ್ಲಿ ಉಂಟಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಆದರೆ ಜನರು ಅಭಿವೃದ್ಧಿಯ ಫಲಾನುಭವಿಗಳು ಮಾತ್ರ ಎಂಬ ನಂಬಿಕೆಯು ಬದಲಾವಣೆಗೆ ಒಳಗಾಗಿದೆ. ಅಮರ್ತ್ಯಸೇನ್ ಅವರು ಬೇರೊಂದು ಸಂದರ್ಭದಲ್ಲಿ ಇಂತಹ ಮನೋಭಾವವನ್ನು





‘ಪೇಶೆಂಟ್ಸ್’ ದೃಷ್ಟಿಕೋನ ಮತ್ತು ‘ಏಜನ್ಸಿ’ ದೃಷ್ಟಿಕೋನವೆಂದು ಕರೆದಿದ್ದಾರೆ. ಮೊದಲನೆಯದು ಜನರನ್ನು ಅಭಿವೃದ್ಧಿಯ ‘ಸಾಧನ’, ‘ಫಲಾನುಭವಿ’ಗಳು ಮಾತ್ರ ಎಂದು ನೋಡಿದರೆ ಎರಡನೆಯದು ಜನರನ್ನು ಅಭಿವೃದ್ಧಿಯ ಕರ್ತೃಗಳು-ನಿಯೋಗಿಗಳು ಎಂದು ನೋಡುವುದಕ್ಕೆ ಸಂಬಂಧಿಸಿದೆ.(ಅಮರ್ತ್ಯಸೇನ್ : ೧೯೯೦-೧೯೯)

ಕರ್ನಾಟಕದಲ್ಲಿ ವಿಕೇಂದ್ರೀಕರಣ-ಗ್ರಾಮೀಣ ಯೋಜನೆಯ ವಿಕಾಸ ಕುರಿತಂತೆ ಡಿ.ಎಂ.ನಂಜುಂಡಪ್ಪನವರು ಐದು ಹಂತಗಳನ್ನು ಗುರುತಿಸಿದ್ದಾರೆ.(೧೯೯೯:೫) ಅವುಗಳ ವಿವರ ಹೀಗಿದೆ.

ಮೊದಲ ಹಂತ - ೧೯೬೦-೧೯೭೩
ಎರಡನೆಯ ಹಂತ - ೧೯೭೩-೧೯೭೮
ಮೂರನೆಯ ಹಂತ - ೧೯೭೮-೧೯೮೬
ನಾಲ್ಕನೆಯ ಹಂತ - ೧೯೮೬-೧೯೯೩ ಮತ್ತು
ಐದನೆಯ ಹಂತ - ೧೯೯೩-೧೯೯೮

ಮೊದಲ ಎರಡು ಹಂತಗಳ ಸಂದರ್ಭದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯು ಸುಸಂಘಟಿತ ಸ್ಥಿತಿಯಲ್ಲಿರಲಿಲ್ಲ. ಮೂರನೆಯ ಹಂತವು ೧೯೮೩ರ ಪಂಚಾಯತ್‌ರಾಜ್ ಕಾಯಿದೆಯ ಅವಧಿಗೆ ಸಮಾನಾಂತರವಾಗಿದ್ದರೆ ನಾಲ್ಕನೆಯ ಹಂತವು ೧೯೮೩ ಮತ್ತು ೧೯೯೩ನೆಯ ಕಾಯಿದೆಗಳ ಮಧ್ಯದ ಕಾಲಾವಧಿಯಾದ್ದಾಗಿದೆ. ಐದನೆಯ ಹಂತವು ೭೩ ಮತ್ತು ೭೪ನೆಯ ಸಂವಿಧಾನ ತಿದ್ದುಪಡಿ ಹಾಗೂ ಅದರ ಪರಿಣಾಮವಾಗಿ ಕರ್ನಾಟಕದಲ್ಲಿ ಜಾರಿಗೆ ಬಂದ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯ ಕಾಲಾವಧಿಗೆ ಸಮಾನಾಂತರವಾಗಿದೆ.

ಈ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ರಾಜ್ಯ ಹಾಗೂ ಕೇಂದ್ರಗಳು ಕೊಡ ಮಾಡುವ ಯೋಜನಾವೆಚ್ಚದಲ್ಲಿ ಜಿಲ್ಲಾವಲಯದ ಪಾಲು ಎಷ್ಟು ಎಂಬುದನ್ನು ಕೊಷ್ಟಕ-೨.೧ರಲ್ಲಿ ತೋರಿಸಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ೧೯೮೭-೮೮ ರಿಂದ ೧೯೯೯-೨೦೦೦ದ ಅವಧಿಯಲ್ಲಿ ಜಿಲ್ಲಾವಲಯದ ಪ್ರಮಾಣ ಕಡಿಮೆಯಾಗುತ್ತಾ ನಡೆದಿರುವುದನ್ನು ನೋಡಬಹುದು. ರಾಜ್ಯದ ಯೋಜನಾವೆಚ್ಚದಲ್ಲಿ ಜಿಲ್ಲಾವಲಯದ ಪಾಲು ೧೯೮೭-೮೮ರಲ್ಲಿ ಶೇ ೨೪.೧೦ ಇದ್ದುದು ೧೯೯೯-೨೦೦೦ರಲ್ಲಿ ಅದು ಶೇ ೧೩.೪೫ಕ್ಕೆ ಇಳಿದಿದೆ. ಕೇಂದ್ರದ ಮೊತ್ತವು ಸರಿಸುಮಾರು ಒಂದೇ ಮಟ್ಟದಲ್ಲಿ ಮುಂದುವರಿದಿದೆ. ಇಂದು ಜಿಲ್ಲೆಯ ಮಟ್ಟದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ಸುಮಾರು ವಾರ್ಷಿಕ ರೂ.೧೦೦೦ ಕೋಟಿಯಷ್ಟು ಹಣಕಾಸು ಮೊತ್ತದ ಯೋಜನೆಗಳನ್ನು ರೂಪಿಸಬಹುದಾಗಿದೆ. ಇದು ರಾಜ್ಯದ ಒಟ್ಟು ಯೋಜನಾವೆಚ್ಚದ ಶೇ.೨೦ರಷ್ಟಾಗುತ್ತದೆ. ಇದನ್ನು ಇನ್ನು ಅಧಿಕಗೊಳಿಸ ಬಹುದು.

ವಿಕೇಂದ್ರೀಕರಣ ಸಂಸ್ಥೆಗಳ ಮೂರು ವರ್ಷಗಳ ಯೋಜನೆ ಮತ್ತು ಯೋಜನೇತರ ವೆಚ್ಚದ ವಿವರಗಳನ್ನು ಕೋಷ್ಟಕ-೨.೨.ರಲ್ಲಿ ನೀಡಿದೆ.

## ಕೋಷ್ಟಕ ೨.೧

### ರಾಜ್ಯ ಯೋಜನಾ ವೆಚ್ಚದಲ್ಲಿ ಜಿಲ್ಲಾ ವಲಯದ ಯೋಜನಾ ವೆಚ್ಚ

| ಕ್ರ. ಸಂ. | ವರ್ಷಗಳು | ವಿವರ | ಯೋಜನಾ ಮೊತ್ತ (ಕೋಟಿ ರೂಪಾಯಿಗಳಲ್ಲಿ) | ಜಿಲ್ಲಾ ಮೊತ್ತ | ಒಟ್ಟು ಮೊತ್ತದಲ್ಲಿ ಜಿಲ್ಲಾ ವಲಯದ ಪ್ರಮಾಣ |
|---|---|---|---|---|---|
| ೧. | ೧೯೮೭-೮೮ | ರಾಜ್ಯ | ೯೧೭ | ೨೨೧ | ೨೪.೧೦ |
| | (ಬ.ಅ) | ಕೇಂದ್ರ | ೨೧೫ | ೧೪೪ | ೬೬.೯೮ |
| | | ಒಟ್ಟು | ೧೧೩೨ | ೩೬೫ | ೩೨.೨೪ |
| ೨. | ೧೯೯೦-೯೧ | ರಾಜ್ಯ | ೧೧೪೫ | ೨೯೩ | ೨೫.೫೯ |
| | (ಬ.ಅ) | ಕೇಂದ್ರ | ೨೨೧ | ೨೫೨ | ೧೧೪.೦೩ |
| | | ಒಟ್ಟು | ೧೩೬೬ | ೫೪೫ | ೩೯.೯೦ |
| ೩. | ೧೯೯೧-೯೨ | ರಾಜ್ಯ | ೧೫೫೮ | ೩೫೭ | ೨೨.೯೧ |
| | (ಬ.ಅ) | ಕೇಂದ್ರ | ೩೭೯ | ೩೧೮ | ೮೩.೯೧ |
| | | ಒಟ್ಟು | ೧೯೩೭ | ೬೭೫ | ೩೪.೮೫ |
| ೪. | ೧೯೯೨-೯೩ | ರಾಜ್ಯ | ೨೧೫೯ | ೩೭೪ | ೧೭.೩೨ |
| | (ಬ.ಅ) | ಕೇಂದ್ರ | ೪೬೬ | ೨೯೬ | ೬೩.೫೨ |
| | | ಒಟ್ಟು | ೨೬೨೫ | ೬೭೦ | ೨೫.೫೨ |
| ೫. | ೧೯೯೩-೯೪ | ರಾಜ್ಯ | ೩೦೨೫ | ೪೭೧ | ೧೫.೫೭ |
| | (ಬ.ಅ) | ಕೇಂದ್ರ | ೫೯೬ | ೩೨೨ | ೫೪.೦೩ |
| | | ಒಟ್ಟು | ೩೬೨೧ | ೭೯೩ | ೨೧.೯೦ |
| ೬. | ೧೯೯೪-೯೫ | ರಾಜ್ಯ | ೩೩೮೩ | ೫೩೮ | ೧೫.೯೦ |
| | (ಬ.ಅ) | ಕೇಂದ್ರ | ೭೯೨ | ೪೩೫ | ೫೪.೯೨ |
| | | ಒಟ್ಟು | ೪೧೭೫ | ೯೭೩ | ೨೩.೩೧ |
| ೭. | ೧೯೯೫-೯೬ | ರಾಜ್ಯ | ೩೭೫೮ | ೬೨೦ | ೧೬.೫೦ |
| | (ಬ.ಅ) | ಕೇಂದ್ರ | ೮೪೦ | ೪೮೦ | ೫೩.೯೩ |
| | | ಒಟ್ಟು | ೪೬೪೮ | ೧೧೦೦ | ೨೩.೬೭ |
| ೮. | ೧೯೯೬-೯೭ | ರಾಜ್ಯ | ೪೩೬೦ | ೭೩೨ | ೧೬.೭೯ |
| | (ಬ.ಅ) | ಕೇಂದ್ರ | ೯೫೧ | ೫೪೧ | ೫೬.೮೯ |
| | | ಒಟ್ಟು | ೫೩೧೧ | ೧೨೭೩ | ೨೩.೯೭ |

| | | | | | |
|---|---|---|---|---|---|
| ೯. | ೧೯೯೭-೯೮ | ರಾಜ್ಯ | ೪೫೪೫ | ೭೩೨ | ೧೬.೧೧ |
| | (ಬ.ಅ) | ಕೇಂದ್ರ | ೧೯೯೦ | ೬೮೮ | ೬೩.೧೨ |
| | | ಒಟ್ಟು | ೫೬೩೫ | ೧೪೨೦ | ೨೫.೨೦ |
| ೧೦. | ೧೯೯೮-೯೯ | ರಾಜ್ಯ | ೫೩೫೩ | ೭೩೨ | ೧೩.೬೭ |
| | (ಬ.ಅ) | ಕೇಂದ್ರ | ೧೧೬೦ | ೭೧೫ | ೬೧.೬೪ |
| | | ಒಟ್ಟು | ೬೫೧೩ | ೧೪೪೭ | ೨೨.೨೨ |
| ೧೧. | ೧೯೯೯-೨೦೦೦ | ರಾಜ್ಯ | ೫೮೮೮ | ೭೯೨ | ೧೩.೪೫ |
| | (ಬ.ಅ) | ಕೇಂದ್ರ | ೧೧೯೯ | ೭೩೬ | ೬೧.೩೮ |
| | | ಒಟ್ಟು | ೭೦೮೭ | ೧೫೨೮ | ೨೧.೫೬ |

ಮೂಲ : ಕರ್ನಾಟಕ ಸರ್ಕಾರ ೨೦೦೦, ಆರ್ಥಿಕ ಸಮೀಕ್ಷೆ : ೧೯೯೯-೨೦೦೦, ಪು : ಎ ೬೫-೬೬

## ಕೋಷ್ಟಕ ೨.೨

## ಪಂಚಾಯಿತ್ ರಾಜ್ ಸಂಸ್ಥೆಗಳ ನಡುವೆ ಸಂಪನ್ಮೂಲ ಹಂಚಿಕೆ : ಕರ್ನಾಟಕ- ೨೦೦೦-೦೧ ನಿಂದ ೨೦೦೨-೦೩

| ವರ್ಷ | ೨೦೦೦-೦೧ (ಕೋಟಿ ರೂಪಾಯಿಗಳಲ್ಲಿ) | | | | | |
|---|---|---|---|---|---|---|
| ಪಂಚಾಯತ್‌ರಾಜ್ ವ್ಯವಸ್ಥೆ | ಯೋಜನೆ | | ಯೋಜನೇತರ | | ಒಟ್ಟು | |
| | ಮೊತ್ತ | ಶೇಕಡ ಪ್ರಮಾಣ | ಮೊತ್ತ | ಶೇಕಡ ಪ್ರಮಾಣ | ಮೊತ್ತ | ಶೇಕಡ ಪ್ರಮಾಣ |
| ಜಿಲ್ಲಾ ಪಂಚಾಯಿತಿಗಳು | ೩೮೨.೫೨ | ೩೯.೯೬ | ೧೦೫೮.೦೩ | ೩೬.೫೮ | ೧೪೪೨.೫೫ | ೩೭.೪೨ |
| ತಾಲ್ಲೂಕು ಪಂಚಾಯಿತಿಗಳು | ೪೪೧.೭೨ | ೪೫.೯೦ | ೧೮೩೪.೪೪ | ೬೩.೪೨ | ೨೨೭೬.೧೬ | ೫೯.೦೫ |
| ಗ್ರಾಮಪಂಚಾಯಿತಿಗಳು | ೧೩೬.೧೧ | ೧೪.೧೪ | - | - | ೧೩೬.೧೧ | ೩.೫೩ |
| ಒಟ್ಟು | ೯೬೨.೩೫ | ೧೦೦.೦೦ | ೨೮೯೨.೪೭ | ೧೦೦.೦೦ | ೩೮೫೪.೮೨ | ೧೦೦.೦೦ |

| ವರ್ಷ | ೨೦೦೧-೦೨ | | | | | |
|---|---|---|---|---|---|---|
| ಪಂಚಾಯತ್‌ರಾಜ್ ವ್ಯವಸ್ಥೆ | ಯೋಜನೆ | | ಯೋಜನೇತರ | | ಒಟ್ಟು | |
| | ಮೊತ್ತ | ಶೇಕಡ ಪ್ರಮಾಣ | ಮೊತ್ತ | ಶೇಕಡ ಪ್ರಮಾಣ | ಮೊತ್ತ | ಶೇಕಡ ಪ್ರಮಾಣ |
| ಜಿಲ್ಲಾ ಪಂಚಾಯಿತಿಗಳು | ೩೯೬.೨೮ | ೩೬.೫೮ | ೧೧೧೭.೮೪ | ೩೭.೩೪ | ೧೫೧೪.೧೨ | ೩೭.೧೪ |
| ತಾಲ್ಲೂಕು ಪಂಚಾಯತಿಗಳು | ೪೬೬.೮೬ | ೪೩.೧೦ | ೧೮೭೬.೧೦ | ೬೨.೬೬ | ೨೩೪೨.೯೬ | ೫೭.೪೭ |
| ಗ್ರಾಮ ಪಂಚಾಯಿತಿಗಳು | ೨೨೦.೦೭ | ೨೦.೩೨ | - | - | ೨೦.೦೭ | ೫.೪೦ |
| ಒಟ್ಟು | ೧೦೮೩.೨೧ | ೧೦೦.೦೦ | ೨೯೯೩.೯೪ | ೧೦೦.೦೦ | ೪೦೭೭.೧೫ | ೧೦೦.೦೦ |

ವರ್ಷ ೨೦೦೨-೦೩

| ಪಂಚಾಯತ್‌ರಾಜ್ ವ್ಯವಸ್ಥೆ | ಯೋಜನೆ | | ಯೋಜನೇತರ | | ಒಟ್ಟು | |
|---|---|---|---|---|---|---|
| | ಮೊತ್ತ | ಶೇಕಡ ಪ್ರಮಾಣ | ಮೊತ್ತ | ಶೇಕಡ ಪ್ರಮಾಣ | ಮೊತ್ತ | ಶೇಕಡ ಪ್ರಮಾಣ |
| ಜಿಲ್ಲಾ ಪಂಚಾಯಿತಿಗಳು | ೩೦೬.೦೬ | ೪೫.೪೭ | ೧೧೪೫.೮ | ೨೩೪.೮೬ | ೧೪೫೧.೮೮ | ೩೬.೬೭ |
| ತಾಲ್ಲೂಕು ಪಂಚಾಯಿತಿಗಳು | ೧೬೮.೯೬ | ೨೫.೧೦ | ೨೧೪೦.೬೫ | ೬೫.೧೪ | ೨೩೦೯.೬೧ | ೫೮.೩೩ |
| ಗ್ರಾಮ ಪಂಚಾಯಿತಿಗಳು | ೧೯೮.೦೭ | ೨೯.೪೩ | - | - | ೧೯೮.೦೭ | ೫.೦೦ |
| ಒಟ್ಟು | ೬೭೩.೦೯ | ೧೦೦.೦೦ | ೩೨೮೬.೪೭ | ೧೦೦.೦೦ | ೩೯೫೯.೫೬ | ೧೦೦.೦೦ |

ಮೂಲ : ಕರ್ನಾಟಕ ಸರ್ಕಾರ ೨೦೦೨, ರಿಪೋರ್ಟ್ ಆಫ್ ದಿ ಸೆಕೆಂಡ್ ಸ್ಟೇಟ್ ಫೈನಾನ್ಸ್ ಕಮೀಷನ್, ಪು.೨೭

ಕೋಷ್ಟಕ-೨.೨ರಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಪಂಚಾಯತ್‌ರಾಜ್ ವ್ಯವಸ್ಥೆಯ ಮೂರು ಸ್ತರಗಳಲ್ಲಿ ಗ್ರಾಮಪಂಚಾಯಿತಿಗಳಿಗೆ ಸಂಬಂಧಿಸಿದಂತೆ 'ಯೋಜನೇತರ' ವೆಚ್ಚದ ಭಾಗವಿಲ್ಲ. ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ವಿವಿಧ ಕಾರ್ಯಕ್ರಮಗಳ ಬಾಬತ್ತು ಗ್ರಾಮಪಂಚಾಯಿತಿಗಳ ಯೋಜನಾ ಖಾತೆಗೆ ಮಾತ್ರ ಹಣಕಾಸು ಸಂದಾಯವಾಗುತ್ತದೆ. ಅವುಗಳಿಗೆ ಯೋಜನೇತರ ವೆಚ್ಚಾವಾವುದಾದರೂ ಇದ್ದರೆ ಅವು ತಮ್ಮ ಸ್ವಂತ ಸಂಪನ್ಮೂಲದಿಂದ ಭರಿಸಬೇಕು. ಬಿಲ್ ಕಲೆಕ್ಟರ್, ನೀರಿನ ಸರಬರಾಜು ಉಸ್ತುವಾರಿ ನೋಡಿಕೊಳ್ಳುವವರು, ನೈರ್ಮಲ್ಯ ಕಾರ್ಯಕರ್ತರು ಮುಂತಾದವರುಗಳ ಸಂಬಳವನ್ನು(ಯೋಜನೇತರ ವೆಚ್ಚ) ಗ್ರಾಮ ಪಂಚಾಯತಿಗಳು ತಾವು ಸಂಗ್ರಹಿಸುವ ತೆರಿಗೆ ಮೂಲದ ಸಂಗ್ರಹದಿಂದ ಭರಿಸಬೇಕಾಗುತ್ತದೆ.

ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ಗಮನಿಸಬೇಕಾದ ಸಂಗತಿಯೆಂದರೆ ಅವುಗಳ ಒಟ್ಟು ವೆಚ್ಚದಲ್ಲಿ ಯೋಜನೇತರ ಬಾಬತ್ತಿನ ಪ್ರಮಾಣವು ಅತ್ಯಂತ ಅಧಿಕವಾಗಿದೆ. ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳ ಒಟ್ಟು ವೆಚ್ಚದಲ್ಲಿ ೨೦೦೨-೦೩ನೆಯ ಸಾಲಿಗೆ ಸಂಬಂಧಿಸಿದಂತೆ ಯೋಜನೇತರ ಬಾಬತ್ತಿನ ಪಾಲು ಕ್ರಮವಾಗಿ ಶೇ ೭೮.೯೨ ಮತ್ತು ಶೇ ೯೨.೬೮. ಇಲ್ಲಿ ನಾವು ಅಗತ್ಯವಾಗಿ ಗಮನಿಸಬೇಕಾದ ಮತ್ತೊಂದು ಸಂಗತಿಯಿದೆ. ಅದೇನೆಂದರೆ ಯಾವುದೇ ಕಾರಣಕ್ಕೂ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಯೋಜನೇತರ ವೆಚ್ಚದಲ್ಲಿ ಕಡಿತ ಮಾಡಲು ಬರುವುದಿಲ್ಲ. ಕರ್ನಾಟಕದ ಪಂಚಾಯತ್‌ರಾಜ್ ಸಂಸ್ಥೆಗಳ ಒಟ್ಟು ವೆಚ್ಚವು ೨೦೦೧-೦೨ ಮತ್ತು ೨೦೦೨-೦೩ನೆಯ ಸಾಲುಗಳ ಅವಧಿಯಲ್ಲಿ ಕಡಿತಕ್ಕೆ ಒಳಗಾಗಿದೆ. ಅದು ರೂ. ೪೦೭೭.೧೫ ಕೋಟಿಯಿಂದ ರೂ. ೩೯೫೯.೫೬ ಕೋಟಿಗೆ ಇಳಿದಿದೆ. ಆದರೆ ಯೋಜನೇತರ ವೆಚ್ಚ ಮಾತ್ರ ಸದರಿ ಅವಧಿಯಲ್ಲಿ ರೂ.೨೯೯೩.೯೪ ಕೋಟಿಯಿಂದ ರೂ.೩೨೮೬.೪೭ ಕೋಟಿಗೇರಿದೆ. ಯೋಜನೇತರ ವೆಚ್ಚದ ಬಹುಭಾಗವು

ಸಾಧ್ಯವಿಲ್ಲ. ಈ ಅವಧಿಯಲ್ಲಿ ಯೋಜನಾವೆಚ್ಚದಲ್ಲಿ ಶೇ.೩೭.೮೬ರಷ್ಟು ಕಡಿತ ಉಂಟಾಗಿದೆ. ಇದು ಒಟ್ಟು ವೆಚ್ಚದಲ್ಲಿ ಉಂಟಾಗಿರುವ ಶೇ. ೨.೮೮ ಕಡಿತಕ್ಕೆ ಹೋಲಿಸಿದರೆ ಅಧಿಕವೆಂದೇ ಹೇಳಬೇಕು.

**ಟಿಪ್ಪಣಿಗಳು**

೧. ಎನ್.ಶಿವಣ್ಣನವರು (೨೦೦೧ : ೨೬೫) ಪಂಚಾಯತ್‌ರಾಜ್ ವ್ಯವಸ್ಥೆಯ ಉಗಮವನ್ನು, ಕರ್ನಾಟಕಕ್ಕೆ ಸಂಬಂಧಿಸಿದಂತೆ ೧೮೬೨ಕ್ಕೆ ಒಯ್ಯುತ್ತಾರೆ. ಮಹಮದ್ ಮಹಬಾಟ್ ಖಾನ್ (೧೯೯೬ : ೪೩) ರವರು ಪ್ರಾಚೀನ ಕಾಲದಲ್ಲಿದ್ದ ಭಾರತೀಯ ಪಂಚಾಯತ್ ವ್ಯವಸ್ಥೆಯ ಸ್ವರೂಪವನ್ನು ಹೀಗೆ ಹಿಡಿದಿಟ್ಟಿದ್ದಾರೆ.

"It is usually accepted that in the Indian subcontinent, the institution of village self-government is as old as village themselves....... the headman and the panchayat seem to have in existence since ancient times..... It has been suggested that these panchayats were controlled by the leaders of upper castes and often by the head man".

೩. ಜಾರ್ಜ್‌ಮ್ಯಾಥ್ಯೂರವರು(೧೯೯೪) ಮೊದಲ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆಗಳು, ಎರಡನೆಯ ತಲೆಮಾರಿನ ಪಂಚಾಯತ್‌ರಾಜ್ ಸಂಸ್ಥೆ ಎಂಬ ಪರಿಭಾಷೆಯನ್ನು ಬಳಸಿದ್ದಾರೆ. ಇದೇ ಅರ್ಥ ಬರುವ ರೀತಿಯಲ್ಲಿ ಕರ್ನಾಟಕದಲ್ಲಿ ವಿಕೇಂದ್ರೀಕರಣ ವ್ಯವಸ್ಥೆ ವಿಕಾಸ ಹೊಂದಿದ ಬಗೆಯ ವಿವರಣೆಯಲ್ಲಿ ಅಬ್ದುಲ್ ಅಜೀಜ್ (೨೦೦೦)ರವರ ಪ್ರಬಂಧದಲ್ಲೂ ಕಾಣಬಹುದು.

೩. ಜನರು ವಿಕೇಂದ್ರೀಕರಣ-ಅಭಿವೃದ್ಧಿ ಕುರಿತಂತೆ ಕೇವಲ ಫಲಾನುಭವಿಗಳಷ್ಟೆ ಅಲ್ಲ. ಅವರು ಅದರ ಕರ್ತೃಗಳೂ ಆಗಿದ್ದಾರೆ ಎಂಬುದನ್ನು ರಜನಿ ಕೊಥಾರಿಯವರು ಹೀಗೆ ಹೇಳಿದ್ದಾರೆ.

"The entire process would be for locating people at the centre of power so that they become the basic engine of the development process and not, as hitherto, merely its beneficiaries"(1996:35)



೩

# ಗ್ರಾಮ ಪಂಚಾಯಿತಿಗಳ ವಿಕೇಂದ್ರೀಕರಣದ ಅಡಿಪಾಯ

## ೩.೧. ಪ್ರಸ್ತಾವನೆ

ಗ್ರಾಮಪಂಚಾಯಿತಿಗಳನ್ನು ತಳಮಟ್ಟದ ಸ್ವಯಂಮಾಡಳಿತ ಸಂಸ್ಥೆಗಳೆಂದು ಕರೆಯಬಹುದು. ಅವುಗಳನ್ನು ವಿಕೇಂದ್ರೀಕರಣದ 'ಪಾಯ'ವೆಂದು ಇಲ್ಲಿ ಪರಿಗಣಿಸಲಾಗಿದೆ. ಈಗಾಗಲೆ ತಿಳಿಸಿರುವಂತೆ ಪ್ರಸ್ತುತ ಅಧ್ಯಯನವು ಗ್ರಾಮಪಂಚಾಯಿತಿಗಳ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಂಗತಿಗಳನ್ನು ಕುರಿತ ಚರ್ಚೆಯಾಗಿದೆ. ಸಾಂಪ್ರದಾಯಿಕ ಅಧ್ಯಯನಗಳಂತೆ ಅವು ಕಾನೂನು-ಶಾಸನಗಳ ಪ್ರಕಾರ ಏನು ಮಾಡಬೇಕಾಗಿತ್ತು ಮತ್ತು ಅವು ಹೇಗೆ ಕಾರ್ಯನಿರ್ವಹಿಸುತ್ತಿವೆ ಎಂಬುದರ ಮಾನದಂಡ ಆಧರಿತ ಮಾಪನದ ಅಧ್ಯಯನ ಇದಾಗಿಲ್ಲ.[೧] ಗ್ರಾಮ ಪಂಚಾಯಿತಿ, ಗ್ರಾಮಸಭೆ, ಜನ ಪ್ರತಿನಿಧಿಗಳು, ಮೀಸಲಾತಿ, ಲಿಂಗಸಂಬಂಧಗಳು ಅಭಿವೃದ್ಧಿ ಮುಂತಾದ ಸಂಗತಿಗಳು ಕೇವಲ ಆಡಳಿತಾತ್ಮಕ-ಶಾಸನಾತ್ಮಕ ಸಂಗತಿಗಳಲ್ಲ ಎಂಬ ನಂಬಿಕೆಯಿಂದ ಇಲ್ಲಿನ ಅಧ್ಯಯನ ಆರಂಭವಾಗುತ್ತದೆ. ಅವುಗಳೆಲ್ಲವೂ ಮೌಲ್ಯ-ಸ್ಪಂದಿ ಸಂಗತಿಗಳಾಗಿವೆ. ಈ ಸಂಗತಿಗಳ ಮೂಲದಲ್ಲಿರುವ ನಂಬಿಕೆ-ಮೌಲ್ಯ- ಅಧಿಕಾರಗಳ ಅರ್ಥವ್ಯಾಪ್ತಿಯನ್ನು ಇಲ್ಲಿ ಹಿಡಿಯಲು ಪ್ರಯತ್ನಿಸಲಾಗಿದೆ. ಗ್ರಾಮವೆನ್ನುವುದು ಎಷ್ಟರಮಟ್ಟಿಗೆ ಒಂದು ಘಟಕವಾಗಿದೆ? ಆದರೆ ಅದನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ವಿವಿಧ ಭಾಗಗಳಾಗಿ ವಿಂಗಡಿಸಬಹುದಾಗಿದೆ. ಭೌಗೋಳಿಕವಾಗಿಯೂ ಅದು ಒಂದು ಘಟಕವಲ್ಲ.[೨] ಕಳೆದ ೫೦ ವರ್ಷಗಳಲ್ಲಿ ಗ್ರಾಮಗಳಿಗೆ ಸಂಬಂಧಿಸಿರುವ ವಿಭಜನೆಯನ್ನು ಹೋಗಲಾಡಿಸಲು ಪ್ರಯತ್ನಗಳು ನಡೆದಿವೆ. ಈ ಪ್ರಯತ್ನಗಳು ಸ್ವಲ್ಪಮಟ್ಟಿಗೆ ಸಫಲವು ಆಗಿವೆ. ಪರಿಶಿಷ್ಟಜಾತಿ-ಪರಿಶಿಷ್ಟ ಪಂಗಡಗಳಿಗೆ ಸೇರಿದ ಮನೆಗಳ ನಡುವೆ ಇಂದು ಲಿಂಗಾಯತರ ಮನೆಗಳು ಇರುವುದನ್ನು ನೋಡಬಹುದು. ಅತ್ಯಂತ ಪ್ರಜ್ಞಾಪೂರ್ವಕವಾಗಿ ಪಂಚಾಯಿತಿಯ ಚುನಾಯಿತ ಸದಸ್ಯರು 'ತಮ್ಮ ಊರಿನಲ್ಲಿ ಅಸ್ಪೃಶ್ಯತೆಯ ಆಚರಣೆಯಿಲ್ಲ' ವೆಂಬುದನ್ನು ಒತ್ತಿ ಹೇಳುತ್ತಾರೆ. ಏಕೆಂದರೆ ಅಸ್ಪೃಶ್ಯತೆಯ ಆಚರಣೆ ಕಾನೂನಿನ ಪ್ರಕಾರ ಶಿಕ್ಷಾರ್ಹವೆಂಬುದು ಅವರಿಗೆ ತಿಳಿದಿದೆ. ಇದಕ್ಕಿಂತ ಹೆಚ್ಚಾಗಿ

ಅಂತಹ ಆಚರಣೆಗಳು ನಮ್ಮ ಹಳ್ಳಿಯಲ್ಲಿವೆಯೆಂದು ಒಪ್ಪಿಕೊಳ್ಳುವುದು ಪ್ರತಿಗಾಮಿ ಸಂಗತಿಯೆಂದು ರಾಜಕೀಯ ಪಕ್ಷಗಳ ಸ್ವಲ್ಪಮಟ್ಟಿನ ಒಡನಾಟವಿರುವ ಗ್ರಾಮಪಂಚಾಯಿತಿ ಅಧ್ಯಕ್ಷರು-ಸದಸ್ಯರುಗಳಿಗೆ ತಿಳಿದಿದೆ.

**ಅಂಬೇಡ್ಕರ್‌ರವರು ಚಿತ್ರಿಸಿದ ಹಳ್ಳಿ ಮತ್ತು ಇಂದಿನ ಗ್ರಾಮ**

ಸಂವಿಧಾನ ಸಭೆಗಳಲ್ಲಿ ಚರ್ಚೆಗಳು ನಡೆಯುತ್ತಿದ್ದ ಸಂದರ್ಭದಲ್ಲಿ (೧೯೪೮) ಡಾ.ಬಿ. ಆರ್.ಅಂಬೇಡ್ಕರ್ ಅವರು 'ಔಟ್‌ಸೈಡ್ ದಿ ಪೋಲ್ಡ್' ಎಂಬ ಪ್ರಬಂಧ ಬರೆದು ಬ್ರಿಟಿಷ್ ಆಡಳಿತಾಧಿಕಾರಿಗಳು ನೀಡಿದ್ದ ಆದರ್ಶವಾದಿ ಗ್ರಾಮ ಚಿತ್ರಕ್ಕೆ ಪ್ರತಿಯಾಗಿ ವಿಷಮತೆಯಿಂದ ಕೂಡಿದ ಗ್ರಾಮದ ಚಿತ್ರವನ್ನು ಅದರಲ್ಲಿ ನೀಡಿದರು. ಗ್ರಾಮಗಳನ್ನು ಅವರು ಹೀಗೆ ಚಿತ್ರಿಸಿದ್ದಾರೆ.[೩]

"ಭಾರತೀಯ ಗ್ರಾಮವೆಂಬುದು ಒಂದು ಸಾಮಾಜಿಕ ಘಟಕವಲ್ಲ. ಅದೊಂದು ಜಾತಿಗಳಿಂದ ಕೂಡಿರುವ ಘಟಕ". ಮುಂದುವರಿದು ಅವರು ಗ್ರಾಮಗಳ ವರ್ಗೀಕೃತ ಚಿತ್ರವನ್ನು ಹೀಗೆ ಮಂಡಿಸಿದ್ದಾರೆ.

೧. ಗ್ರಾಮದ ಜನಸಂಖ್ಯೆಯು ಸ್ಪೃಶ್ಯರು ಮತ್ತು ಅಸ್ಪೃಶ್ಯರು ಎಂದು ಎರಡು ಗುಂಪುಗಳಾಗಿ ವರ್ಗೀಕೃತವಾಗಿರುತ್ತದೆ.

೨. ಸ್ಪೃಶ್ಯರು ಬಹುಸಂಖ್ಯಾತರಾಗಿದ್ದರೆ ಅಸ್ಪೃಶ್ಯರು ಅಲ್ಪಸಂಖ್ಯಾತ ಸಮುದಾಯವಾಗಿದ್ದಾರೆ.

೩. ಸ್ಪೃಶ್ಯರು ಗ್ರಾಮದೊಳಗೆ ಜೀವಿಸುತ್ತಿದ್ದರೆ ಅಸ್ಪೃಶ್ಯರು ಊರಿನ ಹೊರಗೆ ಪ್ರತ್ಯೇಕ ಕೇರಿಗಳಲ್ಲಿ ಜೀವಿಸುತ್ತಾರೆ.[೪]

೪. ಆರ್ಥಿಕವಾಗಿ ಸ್ಪೃಶ್ಯರು ಪ್ರಬಲ ಮತ್ತು ಯಾಜಮಾನ್ಯ ಸಮುದಾಯವಾಗಿದ್ದರೆ ಅಸ್ಪೃಶ್ಯರು ಬಡ ಮತ್ತು ಅವಲಂಬಿ ಸಮುದಾಯವಾಗಿದ್ದಾರೆ.

೫. ಸಾಮಾಜಿಕವಾಗಿ ಸ್ಪೃಶ್ಯರು ಆಳುವವರ್ಗವಾಗಿದ್ದರೆ ಅಸ್ಪೃಶ್ಯರು ವಂಶಪಾರಂಪರ್ಯವಾಗಿ ಹರಿದುಕೊಂಡು ಬಂದ ಜೀತದ ಜೀವಿಗಳಾಗಿದ್ದಾರೆ.

ಅಂಬೇಡ್ಕರ್‌ರವರು ನೀಡಿದ ಗ್ರಾಮದ ಚಿತ್ರವನ್ನು ಇಲ್ಲಿ ನೀಡಲು ಒಂದು ಉದ್ದೇಶವಿದೆ. ಅವರ ವಿವರಣೆ ಯಲ್ಲಿರುವ ಎಲ್ಲ ಲಕ್ಷಣಗಳು ಇಂದಿನ ಗ್ರಾಮಗಳಲ್ಲಿ ನೋಡಲು ಸಿಗಲಿಕ್ಕಿಲ್ಲ. ಆದರೆ ಸ್ಥೂಲವಾಗಿ ಅವರು ಹಿಡಿದಿಟ್ಟಿರುವ ಗ್ರಾಮದ ಸಾರಸತ್ವಕ್ಕಿಂತ ನಮ್ಮ ಹಳ್ಳಿಗಳು ಇಂದು ಭಿನ್ನವಾಗಿವೆಯೆಂದು ಹೇಳಲು ಸಾಧ್ಯವಿಲ್ಲ. ಬಳ್ಳಾರಿ, ಕೊಪ್ಪಳ ಮತ್ತು ಗುಲಬರ್ಗಾ ಜಿಲ್ಲೆಗಳ ಅನೇಕ ಹಳ್ಳಿಗಳಿಗೆ ಸಂಬಂಧಿಸಿದಂತೆ ಇದನ್ನು ನಾವು ಖಚಿತವಾಗಿ ಹೇಳಬಹುದು.

ನಾವು ಕ್ಷೇತ್ರಕಾರ್ಯಕ್ಕಾಗಿ ಭೇಟಿ ಮಾಡಿದ ಬಳ್ಳಾರಿ ಜಿಲ್ಲೆಯ ಕೃಷ್ಣನಗರ/ ದೌಲತ್‌ಪುರ (ಸಂಡೂರು ತಾಲ್ಲೂಕು),[೫] ಚಿಲಕನಹಟ್ಟಿ, ಬೈಲುವದ್ದಿಗೇರಿ, ಪಾಪಿನಾಯಕನ

ಹಳ್ಳಿ (ಹೊಸಪೇಟೆ ತಾಲ್ಲೂಕು), ಹಿರೇಹೆಗ್ಡಾಳು (ಕೂಡ್ಲಿಗಿ ತಾಲ್ಲೂಕು), ಸೊನ್ನ (ಹಗರಿಬೊಮ್ಮನಹಳ್ಳಿ ತಾಲ್ಲೂಕು), ಕೊಪ್ಪಳ ಜಿಲ್ಲೆಯ ಯರೆಹಂಚಿನಾಳ, ಸಿದ್ನಕೊಪ್ಪ, ಜಿನ್ನಾಳ, ಗಾಣದಾಳ್ (ಯಲಬುರ್ಗಾ ತಾಲ್ಲೂಕು)[೬] ತಾಜ್‌ಸುಲ್ತಾನ್‌ಪುರ (ಗುಲಬರ್ಗಾ ತಾಲ್ಲೂಕು), ನೆಲೋಗಿ (ಜೇವರ್ಗಿ ತಾಲ್ಲೂಕು) ಮುಂತಾದ ಹಳ್ಳಿಗಳಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಜನರ ವಸತಿಗಳು ಊರಿನ ಹೊರಗಲ್ಲದಿದ್ದರೂ, ಪ್ರತ್ಯೇಕವಾದ ಕೇರಿಗಳಲ್ಲಿರುವುದು ಕಂಡುಬಂದಿದೆ. ಗ್ರಾಮಗಳಲ್ಲಿ ಜನರನ್ನು ಅವರವರ ಜಾತಿಗಳ ನೆಲೆಯಿಂದ ಗುರುತಿಸುವುದು ರೂಢಿಯಲ್ಲಿದೆ. ಊರಿಗೆ ಭೇಟಿ ನೀಡಿದ ಅಧಿಕಾರಿಗಳು, ರಾಜಕೀಯ ಕಾರ್ಯಕರ್ತರು, ಕ್ಷೇತ್ರಕಾರ್ಯಕ್ಕೆ ಭೇಟಿ ನೀಡಿದ ಸಂಶೋಧಕರು ಹೀಗೆ ಎಲ್ಲರನ್ನು ಗ್ರಾಮಸ್ಥರು ಅವರ ಜಾತಿ ಹಿನ್ನೆಲೆಯಿಂದಲೇ ಗುರುತಿಸುತ್ತಾರೆ. ಇದು ನಮ್ಮ ಕ್ಷೇತ್ರಕಾರ್ಯದ ಸಂದರ್ಭದಲ್ಲೂ ನಮ್ಮ ಅನುಭವಕ್ಕೆ ಬಂದಿದೆ. ನಾವು ಭೇಟಿ ಮಾಡಿದ ಎಲ್ಲ ಹಳ್ಳಿಗಳಲ್ಲೂ ಗುಡಿಸಲುಗಳಲ್ಲಿದ್ದ ಹೊಟೇಲುಗಳಲ್ಲಿ ಪರಿಶಿಷ್ಟಜಾತಿಗೆ ಸೇರಿದ ಹಳ್ಳಿಗರಿಗೆ ಪ್ರತ್ಯೇಕ ಕೂಡುವ ವ್ಯವಸ್ಥೆ ಹಾಗೂ ಪ್ರತ್ಯೇಕ ಚಹಾಕಪ್ಪುಗಳ ವ್ಯವಸ್ಥೆ ಇದ್ದುದು ನಮ್ಮ ಅನುಭವಕ್ಕೆ ಬಂದಿದೆ.

ನಮ್ಮ ಅಧ್ಯಯನದ ಬಹುಮುಖ್ಯ ಪ್ರಮೇಯವೆಂದರೆ "ಗ್ರಾಮೀಣ ಅಭಿವೃದ್ಧಿಯೆಂಬುದು ಗ್ರಾಮೀಣ ಜಾತಿ- ಜಮೀನುದಾರಿ-ಅಧಿಕಾರ ಸಂಬಂಧಗಳಿಗೆ ಭಿನ್ನವಾದ ರೀತಿಯಲ್ಲಿ ಸಂಭವಿಸುತ್ತಿಲ್ಲ" ವೆಂಬುದಾಗಿದೆ. ಇದನ್ನು ಅತ್ಯಂತ ಸ್ಥೂಲವಾಗಿ ಗ್ರಾಮಗಳಲ್ಲಿರುವ ಮನೆಗಳ ಸ್ವರೂಪ, ಅವು ನೆಲೆಗೊಂಡಿರುವ ಜಾಗ, ಜನರ ವೃತ್ತಿ-ಕಸುಬುಗಳು, ಅಂಗಡಿ ಹೊಟೇಲುಗಳಲ್ಲಿ ಜನರನ್ನು ನಡೆಸಿಕೊಳ್ಳುವ ಬಗ್ಗೆ ಮುಂತಾದ ಸಂಗತಿಗಳ ಆಧಾರದ ಮೇಲೆ ಖಚಿತಪಡಿಸಿಕೊಳ್ಳಬಹುದಾಗಿದೆ. ಇಲ್ಲಿ ಪ್ರತಿಪಾದಿತವಾದ ಎಲ್ಲ ಸಂಗತಿಗಳಿಗೂ ಅಪವಾದಗಳಿರುತ್ತವೆ. ಆದರೆ ಅಪವಾದಗಳನ್ನು ಸಾಮಾನ್ಯೀಕರಿಸಿದ ಸಂಗತಿಗಳಾಗಿ ಪರಿಭಾವಿಸಲು ಸಾಧ್ಯವಿಲ್ಲ. ಅಭಿವೃದ್ಧಿಯನ್ನು ತಳಮಟ್ಟದಿಂದ ಪರಿಭಾವಿಸಿಕೊಳ್ಳಬೇಕು ಎಂಬ ವೈಚಾರಿಕ ಪ್ರಣಾಳಿಕೆ ರೂಪುಗೊಂಡು ಅನೇಕ ದಶಕಗಳೇ ಕಳೆದಿದೆ. ವಾಸ್ತವವಾಗಿ ವಿಕೇಂದ್ರೀಕರಣದ ಹಿಂದಿನ ತಾತ್ವಿಕತೆ ಅಧಿಕಾರವನ್ನು ತಳಮಟ್ಟಕ್ಕೆ ಒಯ್ಯುವುದು ಎಂಬುದಾಗಿದೆ. ಇದು ಸ್ವಲ್ಪಮಟ್ಟಿಗೆ ಅನುಷ್ಠಾನಗೊಂಡಿದೆ.[೭] ಆದರೆ ತಳಮಟ್ಟಕ್ಕೆ ಬಂದ ಅಭಿವೃದ್ಧಿ-ಅಧಿಕಾರ ಆಡಳಿತ-ತಳಮಟ್ಟದಲ್ಲಿ ಯಾವ ಸ್ವರೂಪದಲ್ಲಿದೆ? ತಳಮಟ್ಟವನ್ನೇ ಒಂದು ರಚನೆಯೆಂದು ಭಾವಿಸಿದಾಗ ಅಲ್ಲಿ ಅಧಿಕಾರ ಯಾವ ರೀತಿಯಲ್ಲಿ ನೆಲೆಗೊಂಡಿದೆ? ಗ್ರಾಮೀಣ ಪ್ರದೇಶದಲ್ಲಿ ಅಥವಾ ಯಾವುದನ್ನು ತಳಮಟ್ಟ- ಬುಡಮಟ್ಟ ವೆಂದು ಕರೆಯಲಾಗುತ್ತಿದೆಯೋ ಅಲ್ಲಿ ಅಭಿವೃದ್ಧಿ ಯಾ ಅಧಿಕಾರವು ಜಮೀನುದಾರಿ ವರ್ಗ-ಪ್ರಬಲ ಕೋಮುಗಳ ಚೌಕಟ್ಟನ್ನು ಮೀರಿ ಬೆಳೆದಿದೆಯೆಂದು ತುಂಬಾ ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ನಿಜ, ಅಭಿವೃದ್ಧಿಯ ಫಲ ಸಮಾಜದ ವಂಚಿತ ವರ್ಗಗಳಿಗೂ ತಲುಪಿದೆ. ಆದರೆ ಅದರ ಸ್ವರೂಪ, ಅದರ ತಾತ್ವಿಕತೆ, ಅದರ ಸತ್ವ, ಅದರ ಕೇಂದ್ರ

ಜಮೀನುದಾರಿ ವರ್ಗವಾಗಿದೆ ಮತ್ತು ಪ್ರಬಲ ಕೋಮುಗಳಾಗಿವೆ. ತಳಮಟ್ಟವನ್ನೇ ಒಂದು ರಚನೆಯೆಂದು ಪರಿಭಾವಿಸಿದಾಗ, ಅಭಿವೃದ್ಧಿ-ಅಧಿಕಾರ ಅಲ್ಲಿ ಪಿರಿಮಿಡ್ಡಿನ ತುದಿಯಲ್ಲಿ ಮಡಗಟ್ಟಿ ಕೊಂಡಿರುವುದು ಕಂಡುಬರುತ್ತದೆ.[೮] ಅಲ್ಲಿ ಅದು ಮೇಲಿನಿಂದ ಕೆಳಕ್ಕೆ ಹರಿಯುವ ಸ್ವರೂಪವನ್ನೇ ಪಡೆದುಕೊಂಡಿರುವುದನ್ನು ಗಮನಿಸಬಹುದಾಗಿದೆ. ಗ್ರಾಮಗಳಲ್ಲಿ ಅಂಚಿನಲ್ಲಿರುವ ವಂಚಿತ ವರ್ಗಗಳಿಗೆ ಅದರ ಫಲ ದೊರೆತಿದ್ದರೆ, ಅದು ಒಂದು ರೀತಿಯಲ್ಲಿ 'ಕೊಡ ತುಂಬಿದ ಮೇಲೆ ಹೊರ ಚೆಲ್ಲುವ ನೀರಿನ ತೆರದಲ್ಲಿದೆ' ಅಥವಾ 'ಕೊಡಕ್ಕೆ ನೀರು ತುಂಬುವಾಗ ಹೊರಕ್ಕೆ ಸಿಡಿದ ನೀರನ ತೆರದಲ್ಲಿದೆ'.

ಇದರ ಒಟ್ಟಾರೆ ತಥ್ಯವಿಷ್ಟು. ತಳಮಟ್ಟದಲ್ಲಿ ಪ್ರಜಾಪ್ರಭುತ್ವದ ವ್ಯಾಪ್ತಿ ಹರವು ತುಂಬಾ ಸೀಮಿತವಾಗಿರುವುದರಿಂದ- ಅದು ಎಲ್ಲ ವರ್ಗ, ಎಲ್ಲ ಒಣಿ, ಕೇರಿಗಳನ್ನು ಒಳಗೊಂಡಿಲ್ಲ. ಪ್ರಸ್ತುತ ಅಧ್ಯಾಯದ ನಾಲ್ಕನೆಯ ಭಾಗದಲ್ಲಿ ನಮ್ಮ ಗ್ರಾಮೀಣ ಪ್ರದೇಶದ ಪ್ರಜಾಪ್ರಭುತ್ವದ ಸ್ವರೂಪವನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಮೂರನೆಯ ಭಾಗದಲ್ಲಿ ಅಭಿವೃದ್ಧಿ- ಅಧಿಕಾರ ಮಹಿಳೆಯ ಸಂದರ್ಭದಲ್ಲಿ ಯಾವ ಸ್ವರೂಪ ತಳೆದಿದೆ ಎಂಬುದನ್ನು ಚರ್ಚಿಸಲಾಗಿದೆ. ಇಲ್ಲಿನ ಚರ್ಚೆಯ ಮೂಲಕ ನಾವು ಸಂಗ್ರಹಿಸಿದ ಮಾಹಿತಿ ಮೂಲಕ, ನಾವು ಕಂಡುಂಡ ಅನುಭವದ ಬೆಳಕಿನಲ್ಲಿ ಗ್ರಾಮೀಣ ಅಭಿವೃದ್ಧಿ-ವಿಕೇಂದ್ರೀಕರಣವೆನ್ನುವ ಸಂಗತಿಗಳು ಗ್ರಾಮೀಣ ಜಾತಿ ಜಮೀನುದಾರಿ-ಅಧಿಕಾರ ಸಂಬಂಧಗಳಿಗೆ ಭಿನ್ನವಾದ ರೀತಿಯಲ್ಲೇನು ಸಂಭವಿಸುತ್ತಿಲ್ಲವೆಂಬ ಪ್ರಮೇಯವನ್ನು ಸಾಧಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಪ್ರಸ್ತಾವನೆ ಭಾಗವನ್ನು ಬಿಟ್ಟು ನಾಲ್ಕು ಉಪಭಾಗಗಳಿವೆ. ಮೊದಲ ಉಪಭಾಗ (ಅ)ದಲ್ಲಿ ಗ್ರಾಮಪಂಚಾಯಿತಿಗಳ ಚುನಾಯಿತ ಸದಸ್ಯರ ಭೂಮಾಲಿಕತ್ವ ಮತ್ತು ಉದ್ಯೋಗಗಳ ನಡುವಿನ ಸಂಬಧವನ್ನು ಚರ್ಚಿಸಲಾಗಿದೆ. ಜನರ ಪ್ರಾತಿನಿಧ್ಯ ಹಾಗೂ ಜಾತಿ ಯಾಜಮಾನ್ಯಗಳ ನಡುವಿನ ಸಂಬಂಧವನ್ನು ಹಿಡಿದಿಡಲು ಇಲ್ಲಿ ಪ್ರಯತ್ನಿಸಲಾಗಿದೆ.

ಎರಡನೆಯ ಉಪಭಾಗ (ಆ)ದಲ್ಲಿ ಗ್ರಾಮಪಂಚಾಯಿತಿ ಮಟ್ಟದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಹೇಗೆ ಜನರನ್ನು ತಲುಪುತ್ತಿವೆ? ಯಾಕೆ ಅವು ಅಂಚಿನಲ್ಲಿರುವ ದುರ್ಬಲರನ್ನು ದಲಿತರನ್ನು ತಲುಪುವುದಿಲ್ಲ? ಮತ್ತು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅಸಮಾನತೆ ನೆಲೆಗಳು ಯಾವುವು ಎಂಬ ಸಂಗತಿಗಳನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

ಮೂರನೆಯ (ಇ) ಭಾಗದಲ್ಲಿ ವಿಕೇಂದ್ರೀಕರಣ ಹಾಗೂ ಗ್ರಾಮೀಣ ಅಭಿವೃದ್ಧಿ ಇವುಗಳ ನೆಲೆಯಲ್ಲಿ ಮಹಿಳೆಯರನ್ನು ಹೇಗೆ ಪರಿಬಾವಿಸಿಕೊಳ್ಳಲಾಗಿದೆ? ಲಿಂಗಸಂಬಂಧ ಗಳಲ್ಲಿ ಉಂಟಾಗುತ್ತಿರುವ ಬದಲಾವಣೆ ಯಾವ ರೀತಿಯದು? ಮಹಿಳೆಯರ ಸಬಲೀಕರಣದ

ಸ್ವರೂಪ ಯಾವ ಬಗೆಯದು?- ಇವೆ ಮುಂತಾದ ಪ್ರಶ್ನೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಾಯದ ಕೊನೆಯ ನಾಲ್ಕನೆಯ (ಈ) ಉಪಭಾಗದಲ್ಲಿ ವಿಕೇಂದ್ರೀಕರಣ ಹಾಗೂ ಗ್ರಾಮೀಣ ಅಭಿವೃದ್ಧಿಗಳು ಎಷ್ಟರಮಟ್ಟಿಗೆ ಜನತಾಂತ್ರಿಕವಾಗಿದ್ದಾವೆ? ಅಲ್ಲಿನ ಅನುಸಂಧಾನದ ಸ್ವರೂಪ ಯಾವ ಬಗೆಯದು? ಪ್ರಜಾಪ್ರಭುತ್ವದ ಚಾಚು ಎಷ್ಟರಮಟ್ಟಿಗೆ ಜನರನ್ನು ಒಳಗೊಂಡಿದೆ?- ಮುಂತಾದ ಸಂಗತಿಗಳನ್ನು ಚರ್ಚಿಸಲಾಗಿದೆ.

**೩ಅ. ಜನರ ಪ್ರಾತಿನಿಧ್ಯ ಮತ್ತು ಜಾತಿ ಯಾಜಮಾನ್ಯ**

ಗ್ರಾಮಪಂಚಾಯಿತಿಗಳು ಜನರ ಪ್ರಾತಿನಿಧಿಕ ಸಂಸ್ಥೆಗಳಾಗಿವೆ. ಅವು ಚುನಾಯಿತ ಸಂಸ್ಥೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಭಾರತದ ಹಳ್ಳಿಗಳಲ್ಲಿ ಇದ್ದ ಪಂಚಾಯಿತಿಗಳು ಚುನಾಯಿತ ಸಂಸ್ಥೆಗಳಾಗಿರಲಿಲ್ಲ. ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ ೧೯೯೨ರ ಪ್ರಕಾರ ಗ್ರಾಮಪಂಚಾಯಿತಿ ಸದಸ್ಯರ ಸಂಖ್ಯೆಯಲ್ಲಿ ಶೇ.೩೩ರಷ್ಟನ್ನು ಮಹಿಳೆಯರಿಗೆ ಮತ್ತು ಶೇ.೩೩ರಷ್ಟನ್ನು ಹಿಂದುಳಿದ ವರ್ಗಗಳಿಗೆ ಮತ್ತು ಶೇ.೨೩ರಷ್ಟನ್ನು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಿಡಲಾಗಿದೆ. ಕರ್ನಾಟಕದ ೧೯೯೩ರ ಪಂಚಾಯತ್ ಕಾಯಿದೆಯ ವಿಶೇಷತೆಯೇನೆಂದರೆ ಗ್ರಾಮಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳನ್ನು ಮೀಸಲಾತಿ ವ್ಯಾಪ್ತಿಗೆ ತರಲಾಗಿದೆ. ಇದರಿಂದಾಗಿ ದುರ್ಬಲ ವರ್ಗ-ದಲಿತ ವರ್ಗಗಳಿಗೆ ಸೇರಿದ ಪಂಚಾಯಿತಿ ಸದಸ್ಯರೂ ಅಧ್ಯಕ್ಷರಾಗಬಹುದು, ಉಪಾಧ್ಯಕ್ಷರಾಗ ಬಹುದು.

ಮೀಸಲಾತಿ ವ್ಯವಸ್ಥೆಯಿಂದಾಗಿ ಗ್ರಾಮಪಂಚಾಯಿತಿಗಳಲ್ಲಿ ಗ್ರಾಮದ ಎಲ್ಲ ಜಾತಿ ಪಂಗಡಗಳಿಗೆ ಪ್ರಾತಿನಿಧ್ಯ ದೊರೆಯುವಂತಾಗಿದೆ. ಗ್ರಾಮಪಂಚಾಯಿತಿ ಸದಸ್ಯರ ಜಾತಿ ಹಿನ್ನೆಲೆ ಹಾಗೂ ಉದ್ಯೋಗದ ವಿವರಗಳನ್ನು ಕೆಳಕಂಡ ಐದು ಗ್ರಾಮಪಂಚಾಯಿತಿಗಳಿಂದ ಸಂಗ್ರಹಿಸಲಾಗಿದೆ.

**ಗ್ರಾಮಪಂಚಾಯಿತಿಗಳು ೨೦೦೩**

೧. ರಾಮದುರ್ಗ ಗ್ರಾಮಪಂಚಾಯಿತಿ, ರಾಮದುರ್ಗ, ಕೂಡ್ಲಿಗಿ ತಾಲ್ಲೂಕು

೨. ರಾಂಪುರ ಗ್ರಾಮಪಂಚಾಯಿತಿ, ರಾಂಪುರ, ಕೂಡ್ಲಿಗಿ ತಾಲ್ಲೂಕು

೩. ಚೌಡಪುರ ಗ್ರಾಮಪಂಚಾಯಿತಿ ಚೌಡಪುರ, ಕೂಡ್ಲಿಗಿ ತಾಲ್ಲೂಕು

೪. ಆಯ್ಯನಹಳ್ಳಿ ಗ್ರಾಮಪಂಚಾಯಿತಿ, ಅಯ್ಯನಹಳ್ಳಿ, ಕೂಡ್ಲಿಗಿ ತಾಲ್ಲೂಕು

೫. ಹೊಡೇರಿ ಗ್ರಾಮಪಂಚಾಯಿತಿ, ಹೊಡೇರಿ, ಕೂಡ್ಲಿಗಿ ತಾಲ್ಲೂಕು



## ಕೋಷ್ಟಕ ೩.೧

### ಗ್ರಾಮಪಂಚಾಯಿತಿ ಸದಸ್ಯರ ಜಾತಿ ಮತ್ತು ಉದ್ಯೋಗ ಸಂಬಂಧ
### (ಕೂಡ್ಲಿಗಿ ತಾಲ್ಲೂಕಿನ ಐದು ಗ್ರಾಮ ಪಂಚಾಯಿತಿಗಳು)

| ಕ್ರ. ಸಂ. | ಜಾತಿಯ ಹೆಸರು | ಗ್ರಾಮ ಪಂಚಾಯಿತಿ ಸದಸ್ಯರ ಸಂಖ್ಯೆ | ಉದ್ಯೋಗ/ವೃತ್ತಿ | | | | | |
|---|---|---|---|---|---|---|---|---|
| | | | ಒಕ್ಕಲು ತನ | ಒಕ್ಕಲು ತನ | ಕೂಲಿ | ವ್ಯಾಪಾರ | ಮನೆ ಗೆಲಸ | ಇತರೆ |
| ೧. | ಪರಿಶಿಷ್ಟಜಾತಿ | ೯ | ೨ | ೪ | ೨ | ೧ | -- | -- |
| ೨. | ಪರಿಶಿಷ್ಟಪಂಗಡ | ೧೮ | ೮ | ೩ | -- | ೨ | ೩ | ೨ |
| ೩. | ಕುರುಬರು | ೯ | ೪ | -- | -- | ೧ | ೨ | ೨ |
| ೪. | ಬಾರಕೇರರು | ೨ | ೨ | -- | -- | -- | -- | -- |
| ೫. | ನೇಕಾರರು | ೨ | -- | -- | -- | -- | ೧ | ೧ |
| ೬. | ಬಡಿಗೇರರು | ೨ | ೧ | -- | -- | -- | ೧ | -- |
| ೭. | ಮಡಿವಾಳರು | ೨ | ೨ | -- | -- | -- | -- | -- |
| ೮. | ಗೊಲ್ಲರು | ೫ | ೩ | -- | -- | -- | ೨ | -- |
| ೯. | ವೀರಶೈವರು | ೧೮ | ೯ | -- | -- | ೬ | ೨ | ೧ |
| ೧೦. | ಜಂಗಮ | ೪ | ೪ | -- | -- | -- | -- | -- |
| ೧೧. | ಉಪ್ಪಾರರು | ೧ | ೧ | -- | -- | -- | -- | -- |
| ೧೨. | ಪಿಂಜಾರರು | ೨ | -- | -- | ೧ | -- | -- | ೧ |
| ೧೩. | ಇತರೆ | ೨ | ೧ | ೧ | -- | -- | -- | -- |
| | ಒಟ್ಟು | ೭೬ | ೩೭ | ೮ | ೩ | ೧೦ | ೧೧ | ೭ |

ಮಾಹಿತಿ ಸಂಗ್ರಹಿಸಿದ ಐದು ಗ್ರಾಮಪಂಚಾಯಿತಿ ಸದಸ್ಯರ ಒಟ್ಟು ಸಂಖ್ಯೆ ೭೬. ಅವರಲ್ಲಿ ಪರಿಶಿಷ್ಟ ಜಾತಿ ಸದಸ್ಯರ ಸಂಖ್ಯೆ ೯ (ಶೇ.೧೧.೮೪) ಮತ್ತು ಪರಿಶಿಷ್ಟ ಪಂಗಡದ ಸದಸ್ಯರ ಸಂಖ್ಯೆ ೧೮ (ಶೇ.೨೩.೬೮). ಈ ೨೭ ಸದಸ್ಯರಲ್ಲಿ ೧೦ ಸದಸ್ಯರ (ಶೇ.೩೭.೦೪) ವೃತ್ತಿ ಒಕ್ಕಲುತನ ಮತ್ತು ವ್ಯವಸಾಯದ ಜೊತೆ ಕೂಲಿಯನ್ನು ಮಾಡುತ್ತಿರುವ ಸದಸ್ಯರ ಸಂಖ್ಯೆ ೭ (ಶೇ.೨೫.೯೩). ಕೇವಲ ಕೂಲಿಯನ್ನು ಮಾತ್ರವೇ ಅವಲಂಬಿಸಿಕೊಂಡಿರುವವರ ಸಂಖ್ಯೆ ೨. ಕೂಲಿಯನ್ನು ಅವಲಂಬಿಸಿಕೊಂಡಿರುವ ಇಬ್ಬರು ಸದಸ್ಯರೂ ಪರಿಶಿಷ್ಟ ಜಾತಿಗೆ ಸೇರಿದ್ದಾರೆ. (ಶೇ.೭.೪೧).

ಈ ಗ್ರಾಮಪಂಚಾಯಿತಿಗಳಿಗೆ ಸಂಬಂಧಿಸಿದಂತೆ ಪ್ರಬಲ ಜಾತಿಯೆಂದರೆ ಲಿಂಗಾಯತ ಜಾತಿ. ಈ ಜಾತಿಗೆ ಸೇರಿದ ಸದಸ್ಯರ ಸಂಖ್ಯೆ ೨೨ (ಶೇ.೨೮.೯೫). ಈ ಜಾತಿಗೆ ಸೇರಿದ

೨೨ ಸದಸ್ಯರಲ್ಲಿ ೧೩ ಸದಸ್ಯರ ವೃತ್ತಿ ಒಕ್ಕಲುತನ (ಶೇ.೬೩.೬೪). ಉಳಿದವರಲ್ಲಿ ೫ ಜನರ ವೃತ್ತಿ ವ್ಯಾಪಾರ (ಶೇ.೨೨.೭೩) ಮತ್ತು ಇಬ್ಬರು ಸದಸ್ಯರ ವೃತ್ತಿ ಮನೆಗೆಲಸ. ಒಬ್ಬ ಸದಸ್ಯರು ಮಾತ್ರ ವೃತ್ತಿ 'ಇತರೆ' ಎಂದು ಕೊಟ್ಟಿದ್ದಾರೆ.

ಉಳಿದ ಎಲ್ಲ ಜಾತಿಗಳನ್ನು ಹಿಂದುಳಿದ ವರ್ಗವೆಂದು ವರ್ಗೀಕರಿಸಬಹುದಾಗಿದೆ. ಇಬ್ಬರು ಸದಸ್ಯರು ಅಲ್ಪಸಂಖ್ಯಾತರಾಗಿದ್ದಾರೆ. ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರ ಸಂಖ್ಯೆ ೨೫. ಹಿಂದುಳಿದವರ್ಗದ ೨೫ ಸದಸ್ಯರಲ್ಲಿ ೧೪ ಜನರ ವೃತ್ತಿ ಒಕ್ಕಲುತನ (ಶೇ.೫೨) ಮತ್ತು ಮನೆಗೆಲಸ ಮಾಡುವವರ ಸಂಖ್ಯೆ ೬ (ಶೇ.೨೪). ಒಬ್ಬರು ವ್ಯಾಪಾರವನ್ನು ವೃತ್ತಿ ಮಾಡಿಕೊಂಡಿದ್ದರೆ, ೫ ಸದಸ್ಯರು 'ಇತರೆ' ವೃತ್ತಿಗಳಲ್ಲಿದ್ದಾರೆ. ಅಲ್ಪಸಂಖ್ಯಾತ ಕೋಮಿಗೆ ಸೇರಿದ ಇಬ್ಬರು ಸದಸ್ಯರು ಕೂಲಿ ಮಾಡುವವರಾಗಿದ್ದಾರೆ.

ಈ ಐದು ಪಂಚಾಯಿತಿಗಳ ಒಟ್ಟು ಸದಸ್ಯರನ್ನು ತೆಗೆದುಕೊಂಡರೆ (೭೬) ಒಕ್ಕಲುತನ ಮಾಡುವವರ ಸಂಖ್ಯೆ ೩೭ (ಶೇ.೪೮.೬೮). ಒಂಬತ್ತು ಸದಸ್ಯರ ವೃತ್ತಿ ವ್ಯಾಪಾರವಾಗಿದೆ. ಮಹಿಳಾ ಸದಸ್ಯರ ಸಂಖ್ಯೆ ೩೨ (ಶೇ.೪೨.೧೧). ಇವರಲ್ಲಿ ಒಕ್ಕಲುತನ ಮಾಡುವವರ ಸಂಖ್ಯೆ ೧೧ (ಶೇ.೩೪.೩೨). ಮನೆಗೆಲಸವು ವೃತ್ತಿಯೆಂದು ಹೇಳಿರುವವರ ಸಂಖ್ಯೆ ೧೧ (ಶೇ.೩೪.೩೮) ಕೂಲಿ ಮಾಡುವವರ ಸಂಖ್ಯೆ ೮ (ಶೇ.೨೫).

**ಕೋಷ್ಟಕ ೩.೨.**

**ಭೂಮಾಲಿಕರ ಪ್ರಮಾಣ**

| ಕ್ರ. ಸಂ. | ವರ್ಗಗಳು | ಒಟ್ಟು ಸದಸ್ಯರ ಸಂಖ್ಯೆ | ಭೂಮಾಲಿಕರ ಸಂಖ್ಯೆ | ಭೂಮಾಲಿಕರ ಶೇಕಡ ಪ್ರಮಾಣ |
|---|---|---|---|---|
| ೧. | ಪರಿಶಿಷ್ಟ ಪ.ಜಾ.+ ಪ.ಪಂ | ೨೭ | ೧೦ | ಶೇ.೩೭.೦೪ |
| ೨. | ವೀರಶೈವರು | ೨೨ | ೧೩ | ಶೇ.೫೯.೦೯ |
| ೩. | ಹಿಂದುಳಿದ ವರ್ಗ | ೨೫ | ೧೪ | ಶೇ.೫೨.೦೦ |
| ೪. | ಅಲ್ಪಸಂಖ್ಯಾತರು | ೨ | -- | -- |
| ೫. | ಒಟ್ಟು | ೭೬ | ೩೭ | ಶೇ.೪೮.೬೮ |
| ೬. | ಒಟ್ಟು ೭೬ ಸದಸ್ಯರಲ್ಲಿ ಮಹಿಳಾ ಸದಸ್ಯರ ಸಂಖ್ಯೆ | ೩೨ | ೧೧ | ಶೇ.೩೪.೩೮ |

ಹೇಗೆ ನೋಡಿದರೂ ಭೂಮಾಲಿಕರ ಪ್ರಮಾಣ ಪಂಚಾಯಿತಿ ಸದಸ್ಯರಲ್ಲಿ ಅಧಿಕವಾಗಿದೆ. ವೀರಶೈವರು ಮತ್ತು ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ಇದು ಅತ್ಯಂತ ಅಧಿಕ ವಾಗಿದೆ. ವ್ಯಾಪಾರವನ್ನು-ವ್ಯವಸಾಯವನ್ನು ಸೇರಿಸಿದರೆ ಅವರ ಪ್ರಮಾಣ ಶೇ.೬೧.೮೪

ರಷ್ಟಾಗುತ್ತದೆ. ಯಾವುದೇ ಜಾತಿಯಿರಲಿ. ಗ್ರಾಮಪಂಚಾಯಿತಿ ಸದಸ್ಯರಾಗಲು ಭೂಮಿ ಅಥವಾ ಬಂಡವಾಳ ತುಂಬಾ ಅಗತ್ಯವಾದ ಸಂಗತಿಯಾಗಿದೆ.

ಈ ಐದು ಪಂಚಾಯಿತಿಗಳ ಒಟ್ಟು ೭೬ ಸದಸ್ಯರಲ್ಲಿ ಮಹಿಳಾ ಸದಸ್ಯರ ಸಂಖ್ಯೆ ೩೨ (ಶೇ.೪೨.೧೨). ಮಹಿಳಾ ಸದಸ್ಯರ ಜಾತಿ ವಿವರವನ್ನು ಕೆಳಗೆ ಕೋಷ್ಟಕ ೩.೩.ರಲ್ಲಿ ನೀಡಲಾಗಿದೆ.

**ಕೋಷ್ಟಕ ೩.೩.**

| ವರ್ಗಗಳು | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ವೀರಶೈವರು | ಹಿಂದುಳಿದ ವರ್ಗ | ಅಲ್ಪ ಸಂಖ್ಯಾತರು |
|---|---|---|---|---|---|
| ಸದಸ್ಯರ ಸಂಖ್ಯೆ | ೫(೧೫.೬೩) | ೮(೨೫.೦೦) | ೬(೧೮.೭೫) | ೧೨(೩೭.೫) | ೧(೩.೧೨) |

ನಮ್ಮ ಅಧ್ಯಯನದ ಬಹುಮುಖ್ಯ ಪ್ರಮೇಯವೆಂದರೆ ಗ್ರಾಮೀಣ ಅಭಿವೃದ್ಧಿಯೆಂಬುದು ಗ್ರಾಮೀಣ ಜಾತಿ-ಜಮೀನುದಾರಿ ಅಧಿಕಾರ ಸಂಬಂಧಗಳಿಗೆ ಭಿನ್ನವಾದ ರೀತಿಯಲ್ಲಿ ಸಂಭವಿಸುತ್ತಿಲ್ಲವೆಂಬುದಾಗಿದೆ. ಇದನ್ನು ಅತ್ಯಂತ ಸ್ಥೂಲವಾಗಿ ಗ್ರಾಮಗಳಲ್ಲಿರುವ ಮನೆಗಳ ಸ್ವರೂಪ, ಅವು ನೆಲೆಗೊಂಡಿರುವ ಜಾಗ, ಜನರ ವೃತ್ತಿ-ಕಸುಬುಗಳು, ಅಂಗಡಿ, ಹೋಟೆಲುಗಳಲ್ಲಿ ಜನರನ್ನು ನಡೆಸಿಕೊಳ್ಳುವ ಬಗ್ಗೆ ಮುಂತಾದ ಸಂಗತಿಗಳ ಆಧಾರದ ಮೇಲೆ ಖಚಿತಪಡಿಸಿಕೊಳ್ಳಬಹುದಾಗಿದೆ. ಇಲ್ಲಿ ಪ್ರತಿಪಾದಿತವಾದ ಎಲ್ಲ ಸಂಗತಿಗಳಿಗೂ ಅಪವಾದಗಳಿರುತ್ತವೆ. ಆದರೆ ಅಪವಾದಗಳನ್ನು ಸಾಮಾನ್ಯೀಕರಿಸಿದ ಸಂಗತಿಗಳಾಗಿ ಪರಿಭಾವಿಸಲು ಸಾಧ್ಯವಿಲ್ಲ. ಅಭಿವೃದ್ಧಿಯನ್ನು ತಳಮಟ್ಟದಿಂದ ಪರಿಭಾವಿಸಿಕೊಳ್ಳಬೇಕು ಎಂಬ ವೈಚಾರಿಕ ಪ್ರಣಾಳಿಕೆ ರೂಪುಗೊಂಡು ಅನೇಕ ದಶಕಗಳೇ ಕಳೆದಿದೆ. ವಾಸ್ತವವಾಗಿ ವಿಕೇಂದ್ರೀಕರಣದ ಹಿಂದಿನ ತಾತ್ವಿಕತೆ ಅಧಿಕಾರವನ್ನು ತಳಮಟ್ಟಕ್ಕೆ ಒಯ್ಯುವುದು ಎಂಬುದಾಗಿದೆ. ಇದು ಸ್ವಲ್ಪಮಟ್ಟಿಗೆ ಅನುಷ್ಠಾನಗೊಂಡಿದೆ.[೭] ಆದರೆ ತಳಮಟ್ಟಕ್ಕೆ ಬಂದ ಅಭಿವೃದ್ಧಿ-ಅಧಿಕಾರ-ಆಡಳಿತ ತಳಮಟ್ಟದಲ್ಲಿ ಯಾವ ಸ್ವರೂದಲ್ಲಿದೆ? ತಳಮಟ್ಟವನ್ನೇ ಒಂದು ರಚನೆಯೆಂದು ಭಾವಿಸಿದಾಗ ಅಲ್ಲಿ ಅಧಿಕಾರ ಯಾವ ರೀತಿಯಲ್ಲಿ ನೆಲೆಗೊಂಡಿದೆ? ಗ್ರಾಮೀಣ ಪ್ರದೇಶದಲ್ಲಿ ಅಥವಾ ಯಾವುದನ್ನು ತಳಮಟ್ಟ-ಬುಡಮಟ್ಟವೆಂದು ಕರೆಯಲಾಗುತ್ತಿದೆಯೋ ಅಲ್ಲಿ ಅಭಿವೃದ್ಧಿಯ ಅಧಿಕಾರವು ಜಮೀನುದಾರಿ ವರ್ಗ-ಪ್ರಬಲ ಕೋಮುಗಳ ಚೌಕಟ್ಟನ್ನು ಮೀರಿ ಬೆಳೆದಿದೆಯೆಂದು ತುಂಬಾ ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ನಿಜ, ಅಭಿವೃದ್ಧಿಯ ಫಲ ಸಮಾಜದ ವಂಚಿತ ವರ್ಗಗಳಿಗೂ ತಲುಪಿದೆ. ಆದರೆ ಅದರ ಸ್ವರೂಪ, ಅದರ ತಾತ್ವಿಕತೆ, ಅದರ ಸತ್ವ, ಅದರ ಕೇಂದ್ರ ಜಮೀನುದಾರಿ ವರ್ಗವಾಗಿದೆ ಮತ್ತು ಪ್ರಬಲ ಕೋಮುಗಳಾಗಿವೆ. ತಳಮಟ್ಟವನ್ನೇ ಒಂದು ರಚನೆಯೆಂದು ಪರಿಭಾವಿಸಿದಾಗ ಅಭಿವೃದ್ಧಿ-ಅಧಿಕಾರ ಅಲ್ಲಿ ಪಿರಮಿಡ್ಡಿನ ತುದಿಯಲ್ಲಿ ಮಡಗಟ್ಟಿ

ಕೊಂಡಿರುವುದು ಕಂಡುಬರುತ್ತದೆ.[೮] ಅಲ್ಲಿ ಅದು ಮೇಲಿನಿಂದ ಕೆಳಕ್ಕೆ ಹರಿಯುವ ಸ್ವರೂಪವನ್ನೇ ಪಡೆದುಕೊಂಡಿರುವುದನ್ನು ಗಮನಿಸಬಹುದಾಗಿದೆ. ಗ್ರಾಮಗಳಲ್ಲಿ ಅಂಚಿನಲ್ಲಿರುವ ವಂಚಿತ ವರ್ಗಗಳಿಗೆ ಅದರ ಫಲ ದೊರೆತಿದ್ದರೆ, ಅದು ಒಂದು ರೀತಿಯಲ್ಲಿ ಕೊಡ ತುಂಬಿದ ಮೇಲೆ ಹೊರ ಚೆಲ್ಲುವ ನೀರಿನ ತೆರದಲ್ಲಿದೆ ಅಥವಾ ಕೊಡಕ್ಕೆ ನೀರು ತುಂಬುವಾಗ ಹೊರಕ್ಕೆ ಸಿಡಿದ ನೀರನ ತೆರದಲ್ಲಿದೆ.

ಇದರ ಒಟ್ಟಾರೆ ತಥ್ಯವಿಷ್ಟು. ತಳಮಟ್ಟದಲ್ಲಿ ಪ್ರಜಾಪ್ರಭುತ್ವದ ವ್ಯಾಪ್ತಿ-ಹರವು ತುಂಬಾ ಸೀಮಿತವಾಗಿರುವುದರಿಂದ ಅದು ಎಲ್ಲ ವರ್ಗ, ಎಲ್ಲ ಒಣಿ, ಕೇರಿಗಳನ್ನು ಒಳಗೊಂಡಿಲ್ಲ. ಪ್ರಸ್ತುತ ಅಧ್ಯಾಯದ ನಾಲ್ಕನೆಯ ಭಾಗದಲ್ಲಿ ನಮ್ಮ ಗ್ರಾಮೀಣ ಪ್ರದೇಶದ ಪ್ರಜಾಪ್ರಭುತ್ವದ ಸ್ವರೂಪವನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಮೂರನೆಯ ಭಾಗದಲ್ಲಿ ಅಭಿವೃದ್ಧಿ-ಅಧಿಕಾರ ಮಹಿಳೆಯ ಸಂದರ್ಭದಲ್ಲಿ ಯಾವ ಸ್ವರೂಪ ತಳೆದಿದೆ ಎಂಬುದನ್ನು ಚರ್ಚಿಸಲಾಗಿದೆ. ಇಲ್ಲಿನ ಚರ್ಚೆಯ ಮೂಲಕ ನಾವು ಸಂಗ್ರಹಿಸಿದ ಮಾಹಿತಿ ಮೂಲಕ, ನಾವು ಕಂಡುಂಡ ಅನುಭವದ ಬೆಳಕಿನಲ್ಲಿ ಗ್ರಾಮೀಣ ಅಭಿವೃದ್ಧಿ-ವಿಕೇಂದ್ರೀಕರಣವೆನ್ನುವ ಸಂಗತಿಗಳು ಗ್ರಾಮೀಣ ಜಾತಿ-ಜಮೀನುದಾರಿ ಅಧಿಕಾರ ಸಂಬಂಧಗಳಿಗೆ ಭಿನ್ನವಾದ ರೀತಿಯಲ್ಲೇನು ಸಂಭವಿಸುತ್ತಿಲ್ಲವೆಂಬ ಪ್ರಮೇಯವನ್ನು ಸಾಧಿಸಲು ಪ್ರಯತ್ನಿಸಲಾಗಿದೆ.

**೩.ಆ. ಅಭಿವೃದ್ಧಿ ಕಾರ್ಯಕ್ರಮಗಳು : ಅಸಮ ಹಂಚಿಕೆ**

ಮೊದಲನೆಯ ಅಧ್ಯಾಯದ ಭಾಗ ೧.೧ರಲ್ಲಿ ತಿಳಿಸಿರುವಂತೆ ಗ್ರಾಮೀಣ ಅಭಿವೃದ್ಧಿಯ ಅರ್ಥ ಮತ್ತು ವ್ಯಾಪ್ತಿಯು ಗ್ರಾಮ ಅಭಿವೃದ್ಧಿಯ ಅರ್ಥ ಮತ್ತು ವ್ಯಾಪ್ತಿಗಿಂತ ಹಿರಿದಾದುದಾಗಿದೆ. ಗ್ರಾಮೀಣ ಅಭಿವೃದ್ಧಿ ಎನ್ನುವುದು ಒಂದು ನೆಲೆಯಲ್ಲಿ 'ಪ್ರದೇಶ ಅಭಿವೃದ್ಧಿ'ಯೇ ಆಗಿದೆ. (ನಂಜುಂಡಪ್ಪ.ಡಿ.ಎಂ.೧೯೯೯: ೪) ಗ್ರಾಮವನ್ನು ಅಥವಾ ಗ್ರಾಮಪಂಚಾಯಿತಿಯನ್ನು ಯೋಜನೆಯ ಘಟಕವನ್ನಾಗಿ ಮಾಡಿಕೊಂಡು ಅಭಿವೃದ್ಧಿಯನ್ನು ಸಂಘಟಿಸುವ ಪದ್ಧತಿ ಇನ್ನೂ ರೂಢಿಗೆ ಬಂದಿಲ್ಲ. ತಜ್ಞರೇನೋ ವಲಯವಾರು ಯೋಜನೆಗೆ ಪ್ರತಿಯಾಗಿ ಪ್ರದೇಶವನ್ನು ಘಟಕವನ್ನಾಗಿ ಮಾಡಿಕೊಂಡು ಅಭಿವೃದ್ಧಿ ಯೋಜನೆ ರೂಪಿಸುವ ಅಗತ್ಯವನ್ನು ಒತ್ತಿ ಹೇಳುತ್ತಿದ್ದಾರೆ.[೯] ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ 'ಪ್ರದೇಶ ಯೋಜನೆ' ಪದ್ಧತಿ ಆಧರಿಸಿ ಅಭಿವೃದ್ಧಿ ಯೋಜನೆ ರೂಪಗೊಳ್ಳಬೇಕು. ಜಿಲ್ಲೆ-ತಾಲ್ಲೂಕು-ಗ್ರಾಮ-ಗ್ರಾಮಪಂಚಾಯಿತಿ ಹೀಗೆ ಒಂದು ಘಟಕವನ್ನು ಮೂಲವಾಗಿಟ್ಟುಕೊಂಡು ಯೋಜನೆ ರೂಪಿಸುವ ಅಗತ್ಯವಿದೆ. ಇದರಿಂದ ಪ್ರದೇಶ ನಿರ್ದಿಷ್ಟ ಸಂಗತಿಗಳಿಗೆ ಒತ್ತು ದೊರೆಯುತ್ತದೆ. ಅಲ್ಲಿನ ಸಂಪನ್ಮೂಲಗಳ ಸೂಕ್ತ ಬಳಕೆ ಇದರಿಂದ ಸಾಧ್ಯವಾಗುತ್ತದೆ. ಪ್ರದೇಶ ಯೋಜನೆ ಪದ್ಧತಿಯಲ್ಲಿ ಮಾತ್ರ ಯೋಜನೆ ಸಿದ್ಧಪಡಿಸುವ ಕಾರ್ಯವು

ತಳಮಟ್ಟಕ್ಕೆ ಹರಿದು ಬರುವುದು ಸಾಧ್ಯ. ವಲಯವಾರು ಯೋಜನೆಯಿಂದ ವಿಕೇಂದ್ರೀಕರಣಕ್ಕೆ ನ್ಯಾಯ ದೊರೆಯಲಾರದು.

ಇಂದು ಆಚರಣೆಯಲ್ಲಿರುವುದು ವಲಯವಾರು ಯೋಜನೆಯೇ ವಿನಾ ಪ್ರದೇಶವಾರು ಯೋಜನೆಯಲ್ಲ. ಜಿಲ್ಲಾ ಮಟ್ಟದಲ್ಲಿ, ರಾಜ್ಯ ಮಟ್ಟದಲ್ಲಿ ಶಿಕ್ಷಣ, ಆರೋಗ್ಯ, ಕೃಷಿ, ಕೈಗಾರಿಕೆ, ಕುಡಿಯುವ ನೀರು ಸರಬರಾಜು, ವಿದ್ಯುತ್ ಸರಬರಾಜು ಮುಂತಾದ ಸಂಗತಿಗಳಿಗೆ ಸಂಬಂಧಿಸಿದಂತೆ ವಲಯವಾರು ಯೋಜನೆ ಸಿದ್ಧಪಡಿಸಲಾಗುತ್ತಿದೆ. ಹೀಗೆ ಸಿದ್ಧಪಡಿಸಿದ ವಲಯವಾರು ಯೋಜನೆಗಳನ್ನು ಸಂಯೋಜಿಸಿ ಜಿಲ್ಲಾ ಅಭಿವೃದ್ಧಿ ಯೋಜನೆ ರೂಪಿಸಲಾಗುತ್ತಿದೆ. ಹೀಗೆ ರೂಪಿಸಿದ ಯೋಜನೆಗಳು ಗ್ರಾಮಮಟ್ಟದಲ್ಲಿ ಅನುಷ್ಠಾನಗೊಳ್ಳುತ್ತಿವೆ. ಈ ವಲಯಗಳಿಗೆ ಸಂಬಂಧಪಟ್ಟಂತೆ ಕೆಲವು ಸಣ್ಣ-ಪುಟ್ಟ ಕೆಲಸಗಳನ್ನು ಗ್ರಾಮ ಪಂಚಾಯಿತಿಗಳು ನಿರ್ವಹಿಸುತ್ತಿವೆ.

ಈಗಾಗಲೇ ಗುರುತಿಸಿರುವಂತೆ "ಅಭಿವೃದ್ಧಿ ಯಾ ಗ್ರಾಮೀಣ ಅಭಿವೃದ್ಧಿಯು ಗ್ರಾಮೀಣ ಪ್ರದೇಶದಲ್ಲಿರುವ 'ಜಾತಿ-ಜಮೀನುದಾರಿ-ಅಧಿಕಾರ' ಸಂಬಂಧಗಳ ಚೌಕಟ್ಟನ್ನು ಮೀರಿ ಸಂಭವಿಸಲು ಸಾಧ್ಯವಿಲ್ಲ ಅಥವಾ ಸಂಭವಿಸುತ್ತಿಲ್ಲ" ಎಂಬ ಪ್ರಮೇಯವನ್ನು ಸಾಧಿಸಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನ ಮಾಡಲಾಗಿದೆ. ಈಗಾಗಲೇ ತಿಳಿಸಿರುವಂತೆ ಪಿರಮಿಡ್ಡಿನೋಪಾದಿಯಲ್ಲಿರುವ ನಮ್ಮ ಗ್ರಾಮೀಣದ ಸಾಮಾಜಿಕ-ಆರ್ಥಿಕ-ರಾಜಕೀಯ ರಚನೆಯಲ್ಲಿ ಅಭಿವೃದ್ಧಿಯ ಫಲಗಳು ಪಿರಮಿಡ್ಡಿನ ತುದಿಯಲ್ಲಿ ಮಡುಗಟ್ಟಿಕೊಳ್ಳುವ ಗುಣ ಹೊಂದಿರುವುದು ಸ್ಪಷ್ಟ. ಪಿರಮಿಡ್ಡಿನ ತುದಿಯ ಹರವು ಸೀಮಿತವಾಗಿರುತ್ತದೆ ಮತ್ತು ಅದರ ಪಾಯವು ವಿಸ್ತೃತವಾಗಿರುತ್ತದೆ. ಜೀನ್ ಡ್ರೀಜ್ ರವರು ಉತ್ತರ ಪ್ರದೇಶದ ಪಲಾನಪುರ ಎಂಬ ಗ್ರಾಮವನ್ನು ಕುರಿತಂತೆ ನಡೆಸಿದ ಅಧ್ಯಯನದಲ್ಲಿ (೧೯೫೭-೧೯೯೩) ಅಭಿವೃದ್ಧಿಯು ಹೇಗೆ ಪಿರಿಮಿಡ್ಡಿನ ತುದಿಯಲ್ಲಿರುವ ಜಾತಿಗಳ ವಶದಿಂದ ತಪ್ಪಿಸಿಕೊಂಡು ಮಧ್ಯಮ ಹಂತದಲ್ಲಿ ಮಡುಗಟ್ಟಿಕೊಂಡಿರುವ ಪರಿಯನ್ನು ಗುರುತಿಸಿದ್ದಾರೆ. ಹೀಗೆ ಅಭಿವೃದ್ಧಿಯು ತುದಿಯಿಂದ ಕೆಳಕ್ಕೆ ಹರಿಯಲು ಪ್ರಾರಂಭಮಾಡಿ ಅದು ಮಧ್ಯದಲ್ಲೇ ನಿಂತು ಬಿಟ್ಟಿರುವುದರಿಂದ ಅಪಾರ ಪ್ರಮಾಣದಲ್ಲಿ ಬಡವರನ್ನು, ದುರ್ಬಲರನ್ನು, ದಲಿತರನ್ನು ಒಳಗೊಂಡಿರುವ ಪಿರಮಿಡ್ಡಿನ ಪಾಯವನ್ನು ಅದು ತಲುಪಿಲ್ಲ.[೧೯] ಕಾಲಕ್ರಮೇಣ ಅದು ತಳಮಟ್ಟಕ್ಕೂ ಹರಿಯುತ್ತದೆ ಎಂದು ನಂಬಲಾಗಿದೆ. ಇದು ವಿಕಾಸವಾದಿ ದೃಷ್ಟಿಕೋನ. ಇದನ್ನು ಸಮಾಜಶಾಸ್ತ್ರದಲ್ಲಿ 'ಸಾಮಾಜಿಕ ಡಾರ್ವಿನಿಸಮ್ ' ಎಂದು ಕರೆಯುತ್ತಾರೆ. ಗ್ರಾಮೀಣ ಅಭಿವೃದ್ಧಿಯನ್ನು ಕುರಿತಂತೆ ಭಾರತವು ಅಳವಡಿಸಿಕೊಂಡಿರುವ ಕಾರ್ಯಕ್ರಮವು ಇಂತಹ ಸಾಮಾಜಿಕ ಡಾರ್ವಿನಿಸಮ್ ಧೋರಣೆಯನ್ನು ಆಧರಿಸಿದೆ.[೨೦] ಅನೇಕ ಅಧ್ಯಯನಗಳು ತೋರಿಸಿರುವಂತೆ ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಮಸ್ಯೆ ಎಲ್ಲಿದೆಯೆಂದರೆ ಗ್ರಾಮೀಣವನ್ನು ಒಂದು 'ಏಕರೂಪ ಘಟಕ', 'ಒಂದು

## ಕೋಷ್ಟಕ ೩.೪

## ಕೃಷ್ಣನಗರ ಗ್ರಾಮಪಂಚಾಯಿತಿಯಲ್ಲಿ ಶಿಕ್ಷಣದ ಮಟ್ಟ : ೨೦೦೨-೦೩

| ಕ್ರ. ಸಂ. | ವಿವರಗಳು | ಪರಿಶಿಷ್ಟರು(ಪ.ಜಾ+ಪ.ಪಂ) | | | ಇತರೆ | | | ಒಟ್ಟು | | |
|---|---|---|---|---|---|---|---|---|---|---|
| | | ಪು | ಮ | ಒಟ್ಟು | ಪು | ಮ | ಒಟ್ಟು | ಪು | ಮ | ಒಟ್ಟು |
| ೧. | ಜನಸಂಖ್ಯೆ | ೩೩೪ | ೩೧೮ | ೬೫೨ (೧೦.೧೯) | ೨೯೪೩ | ೨೮೦೫ | ೫೭೪೮ (೮೯.೮೧) | ೩೨೭೭ | ೩೧೨೩ | ೬೪೦೦ |
| ೨. | ೦-೬ ವಯೋಮಾನದ ಮಕ್ಕಳು | ೬೯ | ೬೬ | ೧೩೫ | ೪೬೫ | ೪೯೩ | ೯೫೮ | ೫೩೪ | ೫೫೯ | ೧೦೯೩ |
| ೩. | + ೭ ವಯೋಮಾನದ ಜನಸಂಖ್ಯೆ | ೨೬೫ | ೨೫೨ | ೫೧೭ | ೨೪೭೮ | ೨೩೧೨ | ೪೭೯೦ | ೨೭೪೩ | ೨೫೬೪ | ೫೩೦೭ |
| ೪. | ಅಕ್ಷರಸ್ಥರು | ೫೧ | ೪೮ | ೯೯ (೬.೮೫) | ೮೨೦ | ೫೨೬ | ೧೩೪೬ (೯೩.೧೫) | ೮೭೧ | ೫೭೪ | ೧೪೪೫ |
| ೫. | ಸಾಕ್ಷರತಾ ಪ್ರಮಾಣ(ಶೇ) | ೧೯.೨೪ | ೧೯.೦೫ | ೧೯.೧೫ | ೩೩.೦೯ | ೨೨.೭೫ | ೨೮.೧೦ | ೩೧.೭೫ | ೨೨.೩೯ | ೨೭.೨೩ |
| ೬. | ಅಕ್ಷರಸ್ಥರಲ್ಲಿ | | | | | | | | | |
| | ಅಂಗನವಾಡಿ | ೧೧ | ೨೧ | ೩೨ | ೧೫೭ | ೧೧೬ | ೨೭೩ | ೧೬೮ | ೧೩೭ | ೩೦೫ |
| | ಪ್ರಾಥಮಿಕ ಶಾಲೆ | ೩೪ | ೨೬ | ೬೦ | ೫೪೬ | ೩೭೪ | ೯೨೦ | ೫೮೦ | ೪೦೦ | ೯೮೦ |
| | ಪ್ರೌಢಶಾಲೆ | ೬ | ೧ | ೭ | ೭೮ | ೨೧ | ೯೯ | ೮೪ | ೨೨ | ೧೦೬ |
| | ಪದವಿ ಪೂರ್ವ ಮತ್ತು ಮುಂದೆ | - | - | - | ೩೯ | ೧೫ | ೫೪ | ೩೯ | ೧೫ | ೫೪ |

ಮೂಲ : ಕ್ಷೇತ್ರಕಾರ್ಯ, ಕೃಷ್ಣನಗರ ಮತ್ತು ದೌಲತ್‌ಪುರ ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಕುಟುಂಬ ಘಟಕಗಳ ಸಮೀಕ್ಷೆ, ೨೦೦೨-೦೩

ಸಮುದಾಯ'ವೆಂದು ಪರಿಭಾವಿಸಿಕೊಂಡಿರುವುದರಲ್ಲಿದೆ. ಈ ದಿಶೆಯಲ್ಲಿ ಪ್ರಖ್ಯಾತ ಸಮಾಜಶಾಸ್ತ್ರಜ್ಞ ಆಂದ್ರೆ ಬೆಥಿಲ್ಲೆಯ ಕೆಳಗಿನ ಹೇಳಿಕೆ ನಮ್ಮ ಕಣ್ಣು ತೆರೆಸುವಂತಿದೆ. ಗ್ರಾಮೀಣವೆಂಬುದು ಏಕರೂಪಿ ಘಟಕವೆಂದು ಪರಿಭಾವಿಸಿಕೊಳ್ಳುವುದರ ಬಗ್ಗೆ ಬರೆಯುತ್ತ

ಅವರು "The basic mistake lay probably in the assumption that the typical Indian village ever was a community of peasants"[೧೨]

ಭಾರತೀಯ ಗ್ರಾಮಗಳನ್ನು ಕುರಿತಂತೆ 'ಅಂದು-ಇಂದು' ಎಂಬ ವಿಧಾನದಲ್ಲಿ ಕಳೆದ ೨೫ ವರ್ಷಗಳಿಂದ ನಡೆದಕೊಂಡು ಬಂದಿರುವ ಅಧ್ಯಯನಗಳನ್ನು ಸಮೀಕ್ಷಿಸುತ್ತಾ ಜನ್ ಬ್ರೆಮನ್ ರವರು ಸದರಿ ಅಧ್ಯಯನಗಳ ತರ್ಥ್ಯಗಳನ್ನೆಲ್ಲ ಎಂಟು ಮುಖ್ಯ ಸಂಗತಿಗಳಲ್ಲಿ ಹಿಡಿದಿಟ್ಟಿದ್ದಾರೆ.(೧೯೯೭ : ೫೫-೫೯). ಅವರ ಸಮೀಕ್ಷೆಯ ಮುಖ್ಯ ಸಂಗತಿಯೆಂದರೆ ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕ ಸಂಗತಿಗಳಿಗೆ ಸಂಬಂಧಿಸಿದಂತೆ ನಡೆಯುತ್ತಿರುವ ಬದಲಾವಣೆಯ ಗತಿಯಲ್ಲಿ ಸಾಮಾಜಿಕ ಬದಲಾವಣೆಗಳು ನಡೆಯುತ್ತಿಲ್ಲ ಎಂಬುದಾಗಿದೆ. ಆಸ್ತಿ ಮತ್ತು ಅಧಿಕಾರಕ್ಕೆ ಅನುಗುಣವಾಗಿ ಅಭಿವೃದ್ಧಿ ಸಂಭವಿಸುತ್ತಿರುವುದರಿಂದ ಸಾಮಾಜಿಕ ಅಸಮಾನತೆಗಳು ಮುಂದುವರಿಯುತ್ತಿವೆ. ಈ ಬಗೆಯ ಅಭಿವೃದ್ಧಿಯ ಫಲಗಳ ಅಸಮ ಹಂಚಿಕೆಯನ್ನು ಜನ್ ಬ್ರೆಮನ್ ರವರು 'ಆರೋಹಣವಾದಿ ಅಸಮಾನತೆ'ಯೆಂದು ಕರೆದಿದ್ದಾರೆ.[೧೩]

ಪಲಾನಪುರ ಎಂಬ ಉತ್ತರ ಪ್ರದೇಶಕ್ಕೆ ಸೇರಿದ ಗ್ರಾಮವನ್ನು ಕುರಿತ ದೀರ್ಘಾವಧಿ (೧೯೫೭-೧೯೯೩) ಅಧ್ಯಯನದ ಆಧಾರದ ಮೇಲೆ ಜೀನ್ ಡ್ರೀಜ್ ರೂಪಿಸಿದ ತೀರ್ಮಾನ ಈ ಕೆಳಕಂಡಂತಿದೆ. (೧೯೯೭-೧೬೯)

"Like many other villages in westren Uttara Pradesh, Planpur combines a modicum of economic dynamism with a great deal of conservatism in social matters".

ಇದು ತುಂಬಾ ಅರ್ಥ ಗರ್ಭಿತವಾದ ತೀರ್ಮಾನ ಅಥವಾ ಪ್ರಮೇಯವಾಗಿದೆ. ನಮ್ಮ ಅಧ್ಯಯನದ ಸಂದರ್ಭದಲ್ಲೂ ಇಂತಹ ಪ್ರಮೇಯವನ್ನು ಸಮರ್ಥಿಸುವ ಪುರಾವೆಗಳು ದೊರೆತಿವೆ. ಸಾಮಾಜಿಕವಾಗಿ ಯಥಾ ಸ್ಥಿತಿವಾದಿಯಾಗಿರುವುದರಿಂದ ಅಭಿವೃದ್ಧಿಯ ಫಲಗಳು ಸಮಾಜದ ದುರ್ಬಲ/ದಲಿತ ವರ್ಗಗಳಿಗೆ ಮಹಿಳೆಯರಿಗೆ ದೊರೆಯಲು ಸಾಧ್ಯ ವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ನಾವು ಪ್ರಸ್ತುತ ಅಧ್ಯಯನಕ್ಕೆ ರೂಪಿಸಿಕೊಂಡಿರುವ ಪ್ರಮೇಯವನ್ನು ನೋಡಬೇಕು.

ಕೋಷ್ಟಕ ೩.೮ರಲ್ಲಿ ಕೃಷ್ಣನಗರ ಗ್ರಾಮಪಂಚಾಯಿತಿಯಲ್ಲಿನ ಶಿಕ್ಷಣದ ಮಟ್ಟವನ್ನು ವಿವಿಧ ಸಂಗತಿಗಳಿಗೆ ಸಂಬಂಧಿಸಿದಂತೆ ನೀಡಲಾಗಿದೆ. ಅಲ್ಲಿ ತೋರಿಸಿರುವಂತೆ ಪರಿಶಿಷ್ಟರ ಸಾಕ್ಷರತಾ ಪ್ರಮಾಣ ಶೇ ೧೯.೧೫. ಆದರೆ ಇತರರ ಸಾಕ್ಷರತಾ ಪ್ರಮಾಣ ಶೇ ೨೮.೧೦.

ಈ ಗ್ರಾಮ ಪಂಚಾಯಿತಿಯ ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ.೧೦.೯. ಆದರೆ ಅಕ್ಷರಸ್ಥರಲ್ಲಿ ಅವರ ಪ್ರಮಾಣ ಕೇವಲ ಶೇ ೬.೮೫. ಪರಿಶಿಷ್ಟರಿಗೆ ಸಂಬಂಧಿಸಿದಂತೆ ಅಕ್ಷರಸ್ಥರೆಲ್ಲ ಅಂಗನವಾಡಿ, ಪ್ರಾಥಮಿಕ ಮತ್ತು ಪ್ರೌಢಶಾಲೆ ಮಟ್ಟಕ್ಕೆ ಮಾತ್ರ ಏರಿರುವುದು ತಿಳಿಯುತ್ತದೆ. ಪದವಿ ಪೂರ್ವ ಮತ್ತು ಅದಕ್ಕೂ ಮುಂದೆ ಓದಿದವರು ಯಾರು ಇಲ್ಲ. ಇತರರಿಗೆ ಸಂಬಂಧಿಸಿದಂತೆ ಒಟ್ಟು ಸಾಕ್ಷರರಲ್ಲಿ ಪದವಿ ಪೂರ್ವ ಮತ್ತು ಅದಕ್ಕೂ ಮುಂದೆ ಓದಿದವರ ಪ್ರಮಾಣ ಶೇ ೪.೦೧. ಹಾಗೆ ನೋಡಿದರೆ ಇಡೀ ಗ್ರಾಮ ಪಂಚಾಯಿತಿಯೇ ಶೈಕ್ಷಣಿಕವಾಗಿ ಹಿಂದುಳಿದಿದೆ. ಆದರೆ ಅಲ್ಲಿ ಪರಿಶಿಷ್ಟರು ವಂಚಿತ ವರ್ಗಕ್ಕೆ ಸೇರಿದವರಾಗಿದ್ದಾರೆ.

ಈ ಅಧ್ಯಯನಕ್ಕೆ ಭೂಮಿಕೆಯೊದಗಿಸಿದ ಹಳ್ಳಿಗಳೆಲ್ಲವೂ ಕರ್ನಾಟಕದ ಅತ್ಯಂತ ಹಿಂದುಳಿದ ಜಿಲ್ಲೆಗಳಿಗೆ ಸೇರಿವೆಯೆಂಬುದು ತುಂಬಾ ಮುಖ್ಯ. ಕೋಷ್ಟಕ ೩.೫ರಲ್ಲಿ ತಾಲ್ಲೂಕು-ಜಿಲ್ಲೆ ಮತ್ತು ರಾಜ್ಯಕ್ಕೆ ಸಂಬಂಧಿಸಿದ ೬ ರಿಂದ ೧೪ ವಯೋಮಾನದ ಶಾಲೆ ಸೇರದ ಮಕ್ಕಳ ಪ್ರಮಾಣವನ್ನು ತೋರಿಸಿದೆ.

**ಕೋಷ್ಟಕ ೩.೫**

**ಶಾಲೆ ಸೇರದ ೬-೧೪ ವಯೋಮಾನದ ಮಕ್ಕಳ ಪ್ರಮಾಣ : ೨೦೦೧**

| ಕ್ರ. ಸಂ. | ಜಿಲ್ಲೆ/ತಾಲ್ಲೂಕು | ೬-೧೪ ವಯೋ ಮಕ್ಕಳ ಸಂಖ್ಯೆ | ಶಾಲೆ ಸೇರದ ೬-೧೪ ವಯೋ ಮಕ್ಕಳ ಸಂಖ್ಯೆ | ಶೇಕಡ ಪ್ರಮಾಣ |
|---|---|---|---|---|
| ೧. | ಸಂಡೂರು ತಾಲ್ಲೂಕು | ೩೪೧೫೮ | ೫೨೭೮ | ೧೫.೪೫ |
| ೨. | ಬಳ್ಳಾರಿ ಜಿಲ್ಲೆ | ೩೪೪೧೬೧ | ೫೭೬೩೪ | ೧೬.೭೫ |
| ೩. | ಯಲಬುರ್ಗಾ ತಾಲ್ಲೂಕು | ೪೧೮೦೫ | ೬೭೪೭ | ೧೬.೧೪ |
| ೪. | ಕೊಪ್ಪಳ ಜಿಲ್ಲೆ | ೨೧೯೭೭೧ | ೪೬೦೪೬ | ೨೦.೯೫ |
| ೫. | ಕರ್ನಾಟಕ ರಾಜ್ಯ | ೮೧,೦೯,೪೯೪ | ೮,೧೩,೫೬೩ | ೧೦.೦೩ |

ಮೂಲ : ಪ್ರಾದೇಶಿಕ ಅಸಮತೋಲನ ನಿವಾರಣಾ ಅಧ್ಯಯನ ಸಮಿತಿಯ ಅಂತಿಮವರದಿ.
ಭಾಗ - VII(ಅನುಬಂಧ) ಪು.೧೧೪

ರಾಜ್ಯದ ಸರಾಸರಿಗಿಂತ ಬಳ್ಳಾರಿ ಮತ್ತ ಕೊಪ್ಪಳ ಜಿಲ್ಲೆಗಳಲ್ಲಿ ಶಾಲೆ ಸೇರದ ಮಕ್ಕಳ ಪ್ರಮಾಣ ಅಧಿಕವಾಗಿದೆ. ಈ ಜಿಲ್ಲೆ ಮತ್ತು ತಾಲ್ಲೂಕುಗಳು ತೀವ್ರ ತರದ ಶೈಕ್ಷಣಿಕ ದುಸ್ಥಿತಿಯಿಂದ ನರಳುತ್ತಿದೆ. 'ಶಾಲೆ ಸೇರದ ಮಕ್ಕಳು' ಎನ್ನುವುದು ಶೈಕ್ಷಣಿಕ ಸಮಸ್ಯೆಯ ಒಂದು ಮುಖ ಮಾತ್ರ. ಅದರ ಇನ್ನೊಂದು ಮುಖವೆಂದರೆ 'ಶಾಲೆಯನ್ನು ಮಧ್ಯದಲ್ಲಿ

ಬಿಡುವ ಮಕ್ಕಳು' ಎಂಬ ಸಮಸ್ಯೆ. ನಾವು ಅಧ್ಯಯನ ಮಾಡಿದ ಕೃಷ್ಣನಗರ ಮತ್ತು ಯರೆಹಂಚನಾಳ ಗ್ರಾಮಪಂಚಾಯಿತಿಗಳ ವ್ಯಾಪ್ತಿಯ ಪ್ರಾಥಮಿಕ ಶಾಲೆಗಳ ದಾಖಲಾತಿಯನ್ನು ಕೋಷ್ಟಕದಲ್ಲಿ ನೀಡಿದೆ(೩.೬).

**ಕೋಷ್ಟಕ ೩.೬**

**ಶಾಲಾ ದಾಖಲಾತಿ**

| ತರಗತಿ | ಕೃಷ್ಣನಗರ ಗ್ರಾಮ (ಒಂದುಶಾಲೆ : ೨೦೦೧-೦೨) | | | ಯರೆಹಂಚನಾಳ (ಮೂರುಶಾಲೆಗಳು : ೨೦೦೨-೦೩) | | |
|---|---|---|---|---|---|---|
| | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| ೧ನೆಯ ತರಗತಿ | ೬೦ | ೪೨ | ೧೦೨ | ೯೪ | ೭೮ | ೧೭೨ |
| ೨ನೆಯ ತರಗತಿ | ೭೧ | ೭೨ | ೧೪೩ | ೮೬ | ೭೬ | ೧೬೨ |
| ೩ನೆಯ ತರಗತಿ | ೮೨ | ೫೨ | ೧೩೪ | ೧೦೪ | ೭೬ | ೧೮೦ |
| ೪ನೆಯ ತರಗತಿ | ೪೬ | ೨೬ | ೭೨ | ೧೦೪ | ೯೦ | ೧೯೪ |
| ೫ನೆಯ ತರಗತಿ | ೪೨ | ೨೨ | ೬೪ | ೮೦ | ೬೬ | ೧೪೬ |
| ೬ನೆಯ ತರಗತಿ | ೨೬ | ೧೬ | ೪೨ | ೬೩ | ೫೫ | ೧೧೮ |
| ೭ನೆಯ ತರಗತಿ | ೧೬ | ೧೨ | ೨೮ | ೪೪ | ೪೧ | ೮೫ |
| ಒಟ್ಟು | ೩೪೩ | ೨೪೨ | ೫೮೫ | ೫೭೫ | ೪೮೨ | ೧೦೫೭ |

ಈ ಕೋಷ್ಟಕ ೩.೬ರಲ್ಲಿ ಸ್ಪಷ್ಟವಾಗಿ ಕಾಣುವ ಸಂಗತಿಯೇನೆಂದರೆ ಐದನೆಯ ತರಗತಿಯ ನಂತರ ಉಂಟಾಗಿರುವ ದಾಖಲಾತಿಯಲ್ಲಿನ ಕುಸಿತ. ಮೊದಲನೆಯ ತರಗತಿಯಲ್ಲಿ ದಾಖಲಾತಿ ಕೃಷ್ಣನಗರದಲ್ಲಿ ೧೦೨ ಮತ್ತು ಯರೆಹಂಚನಾಳ ಗ್ರಾಮಪಂಚಾಯಿತಿಯಲ್ಲಿ ೧೭೨. ಆದರೆ ಸದರಿ ಶಾಲೆಗಳ ಐದನೆಯ ತರಗತಿಯಲ್ಲಿ ದಾಖಲಾತಿ ಕ್ರಮವಾಗಿ ೬೪ ಮತ್ತು ೧೪೬. ಸದರಿ ಶಾಲೆಗಳ ಒಂದನೆಯ ತರಗತಿಯ ದಾಖಲಾತಿಗೆ ಹೋಲಿಸಿದರೆ ಈ ಶಾಲೆಗಳ ಐದನೆಯ ತರಗತಿಯಲ್ಲಿನ ದಾಖಲಾತಿ ಕ್ರಮವಾಗಿ ಶೇ ೬೨.೭೫ ಮತ್ತು ೮೪.೮೮ರಷ್ಟಿದೆ. ಐದನೆಯ ತರಗತಿಯ ನಂತರ ಎರಡೂ ಗ್ರಾಮಗಳಲ್ಲಿ ದಾಖಲಾತಿ ಕಡಿಮೆಯಾಗುತ್ತಾ ನಡೆದಿದೆ. ಏಳನೆಯ ತರಗತಿಯಲ್ಲಿನ ಮಕ್ಕಳ ಸಂಖ್ಯೆ ಕ್ರಮವಾಗಿ ೨೮ ಮತ್ತು ೮೫. ಒಂದನೆಯ ತರಗತಿಯ ದಾಖಲಾತಿಗೆ ಹೋಲಿಸಿದರೆ ಸದರಿ ಗ್ರಾಮಗಳ ಏಳನೆಯ ತರಗತಿ ದಾಖಲಾತಿ ಕ್ರಮವಾಗಿ ಶೇ ೨೭.೪೫ ಮತ್ತು ಶೇ ೪೯.೪೨ರಷ್ಟಿದೆ. ಇದು ತುಂಬಾ ಆತಂಕಕಾರಿ ಸಂಗತಿಯಾಗಿದೆ. ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳ ಪ್ರಮಾಣ ಇಲ್ಲಿ ಅಧಿಕವಾಗಿದೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ನಾವು ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿ ದುರ್ಬಲರು ಮತ್ತು ದಲಿತರು ಶೈಕ್ಷಣಿಕ ದುಸ್ಥಿತಿಯಿಂದ ನರಳುತ್ತಿರುವುದು ಕಂಡುಬರುತ್ತದೆ.

ಇದೇ ಬಗೆಯ ಅಸಮ ಹಂಚಿಕೆಯನ್ನು ವಸತಿ ನಿರ್ಮಾಣ ಕಾರ್ಯಕ್ರಮದಲ್ಲೂ ಕಾಣಬಹುದು. ಕಾನೂನಿನ ಪ್ರಕಾರ ವಸತಿ ಕಾರ್ಯಕ್ರಮಗಳಲ್ಲಿ ಬಡತನದ ರೇಖೆ ಕೆಳಗಿನ ಕುಟುಂಬಗಳಿಗೆ ಮಾತ್ರ ಸಹಾಯಧನದಿಂದ ಕೂಡಿದ ವಸತಿ ಸೌಲಭ್ಯ ನೀಡಲಾಗುವುದು. ಆದರೆ ನಾವು ನೋಡಿದಂತೆ ಈ ಕಾರ್ಯಕ್ರಮದಲ್ಲಿ ಹೆಚ್ಚಾಗಿ ಬಡತನದ ರೇಖೆಯ ಮೇಲಿರುವ ಕುಟುಂಬಗಳು ಮನೆ ಪಡೆದುಕೊಂಡಿರುವ ನಿದರ್ಶನಗಳಿವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಒಂದು ಅಕ್ರಮವನ್ನು ಇಲ್ಲಿ ದಾಖಲಿಸಬಹುದು.

ಪ್ರಬಲ ಕೋಮುಗಳಿಗೆ ಸೇರಿದ ಪ್ರಭಾವಶಾಲಿ ಕುಟುಂಬಗಳು ತಮ್ಮ ಮಕ್ಕಳನ್ನು ಬಡತನದ ರೇಖೆಯ ಕೆಳಗಿರುವ ವ್ಯಕ್ತಿಗಳೆಂದು ದಾಖಲೆ ಸೃಷ್ಟಿಸಿ ವಸತಿ ಕಾರ್ಯಕ್ರಮದಲ್ಲಿ ಸೌಲಭ್ಯ ಪಡೆಯುತ್ತಿರುವುದು ಕಂಡುಬಂದಿದೆ. ಈಗಾಗಲೇ ದೊಡ್ಡ ಮನೆಗಳಿರುವ ಕುಟುಂಬಗಳು ವಸತಿ ಸೌಲಭ್ಯ ಪಡೆದ ಅನೇಕ ನಿದರ್ಶನಗಳು ನಮ್ಮ ಗಮನಕ್ಕೆ ಬಂದಿವೆ.

ವಸತಿ ಕಾರ್ಯಕ್ರಮದಿಂದಾಗಿ ಉಂಟಾಗುತ್ತಿರುವ ಒಂದು ಬಹುಮುಖ್ಯ ಬೆಳವಣಿಗೆ ಯೆಂದರೆ ಎಲ್ಲ ಜಾತಿಯ ಜನರೂ ಯಾವುದೇ ಭೌಗೋಳಿಕ ಭಿನ್ನತೆಯಿಲ್ಲದೆ ಒಂದೇ ಕಡೆ ಒಟ್ಟಾಗಿ ಬದುಕುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಯಲಬುರ್ಗಾ ತಾಲ್ಲೂಕಿನ ಯರೆಹಂಚನಾಳ ಗ್ರಾಮಪಂಚಾಯಿತಿ ವ್ಯಾಪ್ತಿಯ ಸಿದ್ನಕೊಪ್ಪ ಗ್ರಾಮದಲ್ಲಿ ಪರಿಶಿಷ್ಟರಿಗೆ ದೊರೆತ ಮನೆಗಳ ಮಧ್ಯ ಲಿಂಗಾಯಿತರು ಪಡೆದುಕೊಂಡ ಮನೆಗಳಿವೆ. ಮನೆ ಬೇಕೆ ಬೇಕು ಎಂದಾದರೆ ಗ್ರಾಮಪಂಚಾಯಿತಿಯು ನೀಡಿದ ಸ್ಥಳದಲ್ಲಿ ಪಡೆದುಕೊಳ್ಳಬೇಕು. ಊರು-ಕೇರಿ ಎಂಬ ವಿಂಗಡಣೆಯನ್ನು ಇದು ಅಳಿಸಿ ಹಾಕುತ್ತಿರುವಂತೆ ಕಾಣುತ್ತದೆ. ಇಂತಹ ಪ್ರಕ್ರಿಯೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿಲ್ಲ. ಈಗಾಗಲೇ ಹೇಳಿದಂತೆ ನೀರು ತುಂಬಿ ಕೊಳ್ಳುತ್ತಿರುವಾಗ ಕೊಡದಿಂದ ಸಿಡಿದ ನೀರಿನಂತೆ ಇಂತಹ ಬದಲಾವಣೆಗಳು ಮಂದಗತಿಯಲ್ಲಿ ನಡೆಯುತ್ತಿರುವುದನ್ನು ಗಮನಿಸಬಹುದು. ಇದರಿಂದಾಗಿಯೇ ಗ್ರಾಮಪಂಚಾಯಿತಿಗಳ ಅಭಿವೃದ್ಧಿ ಕಾರ್ಯಕ್ರಮಗಳ ಸೌಲಭ್ಯ-ಸವಲತ್ತು ಹೆಚ್ಚಾಗಿ ಪ್ರಬಲ ಜಾತಿಗಳ ವಶವಾಗುತ್ತಿವೆ.

**೩.೩. ವಿಕೇಂದ್ರೀಕರಣ-ಗ್ರಾಮೀಣ ಅಭಿವೃದ್ಧಿ ಮತ್ತು ಲಿಂಗಸಂಬಂಧಗಳು**

ವಿಕೇಂದ್ರೀಕರಣ-ಪಂಚಾಯತ್ ರಾಜ್ ಸಂಸ್ಥೆಗಳು - ಗ್ರಾಮೀಣ ಅಭಿವೃದ್ಧಿ ಇವುಗಳು ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರನ್ನು ಹೇಗೆ ತೊಡಗಿಸಿಕೊಂಡಿವೆ, ಮಹಿಳೆಯರನ್ನು ಹೇಗೆ ಪರಿಭಾವಿಸಿಕೊಂಡಿವೆ, ಮಹಿಳೆಯರ ಸ್ಥಿತಿಗತಿ-ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಯಾವ ಬಗೆಯ ಬದಲಾವಣೆಗಳನ್ನು ಅವು ತಂದಿವೆಯೆಂಬುದರ ಚರ್ಚೆಯು ತುಂಬಾ ಕುತೂಹಲಕಾರಿಯಾದುದಾಗಿದೆ. ಸ್ವಾತಂತ್ರ್ಯಾನಂತರ ಮೊದಲ ಎರಡು-ಮೂರು ದಶಕಗಳ ಕಾಲಾವಧಿಯಲ್ಲಿ ಅಭಿವೃದ್ಧಿ-ವಿಕೇಂದ್ರೀಕರಣ-ರಾಜಕಾರಣ ಇವುಗಳಿಗೆ ಸಂಬಂಧಿಸಿದಂತೆ ಮಹಿಳೆಯರನ್ನು ಸ್ವತಂತ್ರ ಘಟಕವಾಗಿ ಪರಿಭಾವಿಸಿಕೊಳ್ಳುವ ಪದ್ಧತಿಯಿರಲಿಲ್ಲ. ಅವರನ್ನು ಜನಸಂಖ್ಯಾಘಟಕವಾಗಿ(demographic unit) ನೋಡಲಾಗುತ್ತಿತ್ತೇ ವಿನಾ

ಸಾಮಾಜಿಕ ಘಟಕವಾಗಿ ನೋಡುವ ಪದ್ಧತಿ ರೂಢಿಯಲ್ಲಿರಲಿಲ್ಲ. ಮೊದಲನೆಯ ತಲೆಮಾರಿನ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಒಟ್ಟಾರೆ ಮಹಿಳೆ ಗೈರುಹಾಜರಾಗಿದ್ದಳು. ಮುಂದೆ ೧೯೭೦ರ ದಶಕದಲ್ಲಿ ಮಹಿಳೆಯರನ್ನು ಅಭಿವೃದ್ಧಿ-ರಾಜಕಾರಣದ ನೆಲೆಗಳಲ್ಲಿ ಪರಿಭಾವಿಸಿಕೊಳ್ಳುವ ಪರಿ ಬದಲಾಯಿತು. ಎಸ್ತರ್ ಬೋಸರಪ್‌ನ ಸಂಶೋಧನೆಗಳು, ಯುಎನ್‌ಡಿಪಿಯ ಪ್ರಯತ್ನಗಳು, ಮಹಿಳೆಯರ ಸ್ಥಿತಿಗತಿ ಕುರಿತ ಸಮಿತಿಯ 'ಟುವರ್ಡ್ಸ್ ಈಕ್ವಾಲಿಟಿ' ಎಂಬ ವರದಿ, ಅಮರ್ತ್ಯಸೇನ್ ಬರಹಗಳು ಮುಂತಾದವು ಮಹಿಳೆಯರನ್ನು ಪರಿಭಾವಿಸಿಕೊಳ್ಳುವ ಪರಿಯನ್ನು ಕುರಿತಂತೆ ಮೂಲಭೂತ ಬದಲಾವಣೆಗೆ ಕಾರಣವಾದವು. ಮಹಿಳೆಯರಿಗೆ ತಮ್ಮದೇ ಆದ ಹಿತಾಸಕ್ತಿಗಳಿರುತ್ತವೆ-ಹಿತಾಸಕ್ತಿಗಳಿರಬಹುದು ಎಂಬ ಮೂಲಭೂತ ಸಂಗತಿಯನ್ನೇ ಹಿಂದೆ ತಿರಸ್ಕರಿಸಲಾಗಿತ್ತು. ಅವರ ಕಾರ್ಯಕ್ಷೇತ್ರವೇನಿದ್ದರೂ ಕುಟುಂಬದ ಚೌಕಟ್ಟಿನಲ್ಲಿ, ಅಂದರೆ ಖಾಸಗತಿಯಾದದ್ದು ಎಂದು ಪರಿಭಾವಿಸಿಕೊಂಡು ಅವರಿಗೆ ಸಾರ್ವಜನಿಕತೆಯನ್ನು ಸಾಮಾಜಿಕತೆಯನ್ನು-ತಿರಸ್ಕರಿಸಲಾಗಿತ್ತು.(ವಿವರಗಳಿಗೆ ನೋಡಿ ಅಮರ್ತ್ಯಸೇನ್ ೧೯೯೦, ಶ್ರೀಲತಾಬಾಟ್ಲಿವಾಲಾ ೧೯೯೪, ಶ್ರೀ ಲತಾಬಾಟ್ಲಿವಾಲಾ ಮತ್ತು ಇತರರು ೧೯೯೮, ನೈಲಾಕಬೀರ್ ೧೯೯೬, ಟುವರ್ಡ್ಸ್ ಈಕ್ವಾಲಿಟಿ ವರದಿ ೧೯೭೫)

ಮಹಿಳಾವಾದಿ ಸಿದ್ಧಾಂತಗಳ ಪ್ರಭಾವದಿಂದಾಗಿ, ಮಹಿಳಾ ಚಳುವಳಿಯ ಪರಿಣಾಮ ದಿಂದಾಗಿ, ರಾಷ್ಟ್ರೀಯ-ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಹಿಳೆಯರನ್ನು ಕುರಿತ ಅಧ್ಯಯನ, ಅಭಿವೃದ್ಧಿಗೆ ಸಂಬಂಧಿಸಿದಂತೆ ರೂಪುಗೊಂಡ ಸಾಂಸ್ಥಿಕ ರಚನೆಗಳಿಂದಾಗಿ ಮಹಿಳೆಯರನ್ನು ಪರಿಭಾವಿಸಿಕೊಳ್ಳುವ ಪರಿಯೇನೋ ಬದಲಾಯಿತು. ಆದರೆ ಈ ಬದಲಾವಣೆಗಳೂ ಸಹ ಮಹಿಳೆಯರಿಗೆ ನ್ಯಾಯ ಒದಗಿಸುವುದರಲ್ಲಿ ವಿಫಲವಾಗಿದ್ದಾವೆ. ವಿಕೇಂದ್ರೀಕರಣ ಮತ್ತು ಗ್ರಾಮೀಣ ಅಭಿವೃದ್ಧಿಗಳಿಗೆ ಸಂಬಂಧಿಸಿದಂತೆ ಮಹಿಳೆಯರನ್ನು ಪರಿಭಾವಿಸಿಕೊಳ್ಳುವ ಬಗೆಯಲ್ಲಿ ಬದಲಾವಣೆಯುಂಟಾದ ಮೇಲೂ ಸಹ ಹೇಗೆ ಮಹಿಳೆಯರ ಸಮಸ್ಯೆಗಳು ಅನೂಚಾನವಾಗಿ ಹರಿದುಕೊಂಡ ಬಂದ ಪರಂಪರಾನುಗತ ನೆಲೆಯಲ್ಲೇ ಮುಂದುವರಿದಿವೆ ಎಂಬುದನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿರುವ ಮಾಹಿತಿ ಹಾಗೂ ಪಡೆದುಕೊಂಡ ಅನುಭವಗಳ ಹಿನ್ನಲೆಯಲ್ಲಿ ಚರ್ಚಿಸುವುದು ಪ್ರಸ್ತುತ ಭಾಗದ ಮೂಲ ಉದ್ದೇಶವಾಗಿದೆ.

೧೯೭೦ರ ನಂತರ ಮಹಿಳೆಯರನ್ನು ಅಭಿವೃದ್ಧಿ ಮತ್ತು ರಾಜಕಾರಣಗಳಿಗೆ ಸಂಬಂಧಿಸಿ ದಂತೆ ಪರಿಭಾವಿಸಿಕೊಳ್ಳುವ ಬಗೆಯಲ್ಲಿ ಬದಲಾವಣೆಯಾಗಿದ್ದನ್ನು ಅನೇಕ ಅಧ್ಯಯನಗಳು ಗುರುತಿಸಿವೆ. ಆದರೆ ಈ ಬದಲಾವಣೆಗಳು ಮಹಿಳೆಯರನ್ನು ಕೇವಲ ಅಭಿವೃದ್ಧಿಯ-ರಾಜಕಾರಣದ 'ಫಲಾನುಭವಿ'ಗಳಾಗಿ, ಫಲವನ್ನು ಕೇವಲ 'ಪಡೆದುಕೊಳ್ಳುವ' ಘಟಕವಾಗಿ ಪರಿಭಾವಿಸಿಕೊಂಡಿವೆಯೇ ವಿನಾ ಅವರನ್ನು ಅಭಿವೃದ್ಧಿಯ-ರಾಜಕಾರಣದ 'ನಿಯೋಗಿ'ಗಳಾಗಿ, 'ಏಜೆನ್ಸಿ'ಯಾಗಿ ಪರಿಭಾವಿಸಿಕೊಂಡಿಲ್ಲ. ಈ ಬಗೆಯ ಪರಿಭಾವಿಸಿಕೊಳ್ಳುವ ಬಗೆಯನ್ನು ಅಮರ್ತ್ಯಸೇನ್ ರವರು 'ಪೇಶೆಂಟ್ಸ್' ದೃಷ್ಟಿಕೋನವೆಂದು ಕರೆದಿದ್ದಾರೆ. ಅವರು 'ಪೇಶೆಂಟ್ಸ್ ' ದೃಷ್ಟಿಕೋನ ಮತ್ತು 'ಏಜೆನ್ಸಿ' ದೃಷ್ಟಿಕೋನಗಳ ನಡುವೆ ಭಿನ್ನತೆಯನ್ನು

ಗುರುತಿಸುತ್ತಾರೆ.[೧೪] ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕುರಿತಂತೆ ಕೂಡ ಎರಡು ಬಗೆಯ ಸೈದ್ಧಾಂತಿಕ ನೆಲೆಗಳಿರುವುದನ್ನು ಅಧ್ಯಯನಗಳು ಗುರುತಿಸಿದ್ದಾವೆ. ಎರಡು ಬಗೆಯ ಸೈದ್ಧಾಂತಿಕ ನೆಲೆಗಳು ಹೀಗಿವೆ.

೧. ಮಹಿಳೆಯರ ದೈನಂದಿನ ಅಗತ್ಯಗಳು (ಪ್ರಾಕ್ಟಿಕಲ್ ಜೆಂಡರ್ ನೀಡ್ಸ್)

೨. ಮಹಿಳೆಯರ ಸಂಘರ್ಷಣಾತ್ಮಕ ಅಗತ್ಯಗಳು (ಸ್ಟ್ರೇಟೆಜಿಕ್ ಜೆಂಡರ್ ನೀಡ್ಸ್)

ಸರ್ಕಾರದ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ದೈನಂದಿನ ಅಗತ್ಯಗಳನ್ನು ಈಡೇರಿಸುವಲ್ಲಿ ತೋರಿಸುವ ಆಸಕ್ತಿಯನ್ನು ಮಹಿಳೆಯರ ಸಂಘರ್ಷಣಾತ್ಮಕ ಅಗತ್ಯಗಳನ್ನು ಈಡೇರಿಸಲು ತೋರಿಸುವುದಿಲ್ಲವೆಂಬುದು ಇಂದು ಸ್ಪಷ್ಟವಾಗಿದೆ. ಈ ಕಾರ್ಯಕ್ರಮಗಳು ಮಹಿಳೆಯರ ಸ್ಥಿತಿಗತಿಯನ್ನು ಉತ್ತಮಪಡಿಸಬಲ್ಲವೇ ವಿನಾ ಅವರ ಸ್ಥಾನಮಾನಗಳನ್ನು ಉತ್ತಮಪಡಿಸಲಾರವು. (ಶ್ರೀಲತಾಬಾಟ್ಲಿವಾಲಾ ೧೯೯೪, ನೈಲಾಕಬೀರ್:೧೯೯೬)

**ಮಹಿಳೆಯರ ದೈನಂದಿನ ಅಗತ್ಯಗಳು** : ಆಹಾರ, ಆರೋಗ್ಯ, ಶಿಕ್ಷಣ, ಉದ್ಯೋಗ, ಸಮಾನ ವೇತನ, ಸುಧಾರಿಸಿದ ತಂತ್ರಜ್ಞಾನ, ಮಕ್ಕಳ ಕಲ್ಯಾಣ ಮುಂತಾದವು.

**ಮಹಿಳೆಯರ ಸಂಘರ್ಷಣಾತ್ಮಕ ಅಗತ್ಯಗಳು** : ಲಿಂಗ ಆಧರಿತ ಶ್ರಮ ವಿಭಜನೆ ತೊಡೆದು ಹಾಕುವುದು, ಕೌಟುಂಬಿಕ ಶ್ರಮದ ಹೊಣೆಯನ್ನು ಕಡೆಮೆ ಮಾಡುವುದು, ನೀತಿ-ನಿರ್ಣಯದಲ್ಲಿ ಪಾಲುಗೊಳ್ಳುವುದು, ಆಸ್ತಿಯಲ್ಲಿ ಪಾಲು, ಅತ್ಯಾಚಾರದ ವಿರುದ್ಧ ರಕ್ಷಣೆ ಮುಂತಾದವು.

ಸರ್ಕಾರ- ಸಮಾಜಗಳು ಮಹಿಳೆಯರ ದೈನಂದಿನ ಅಗತ್ಯಗಳನ್ನು ಈಡೇರಿಸಲು ಆಸಕ್ತಿ ತಳೆಯುತ್ತವೆ. ಆದರೆ ಮಹಿಳೆಯರ ಸಂಘರ್ಷಣಾತ್ಮಕ ಅಗತ್ಯಗಳನ್ನು ನಿರ್ವಹಿಸಲು ಆಸಕ್ತಿ ತೋರುವುದಿಲ್ಲ. ಏಕೆಂದರೆ ಅವು ಅನೇಕ ಬಗೆಯ ಸಾಮಾಜಿಕ-ಸೈದ್ಧಾಂತಿಕ ಬದಲಾವಣೆಗಳನ್ನು ಬಯಸುತ್ತವೆ.

**ಪೋಲೀಸು ಸ್ಟೇಷನ್‌ಗೆ ಹೋದ ಹೆಣ್ಣು!**

ಮಹಿಳೆಯರ ಬಗ್ಗೆ ಗ್ರಾಮೀಣದಲ್ಲಿ ಜನರು ಯಾವ ಭಾವನೆ ಇಟ್ಟುಕೊಂಡಿದ್ದಾರೆ, ಮಹಿಳೆಯರನ್ನು ಪುರುಷರು ಹೇಗೆ ಪರಿಭಾವಿಸಿಕೊಂಡಿದ್ದಾರೆ ಎಂಬುದರ ಮೇಲೆ ನಾವು ನೋಡಿದ ಒಂದು ಪ್ರಸಂಗ ಬೆಳಕು ಚೆಲ್ಲುತ್ತದೆ. ಯಲಬುರ್ಗಾ ತಾಲ್ಲೂಕಿನ ಯರೆಹಂಚನಾಳ ಗ್ರಾಮಪಂಚಾಯಿತಿ ಕಚೇರಿಯಲ್ಲಿ ನಾವು ಪಂಚಾಯಿತಿ ಸದಸ್ಯರ ಜೊತೆಯಲ್ಲಿ ಚರ್ಚೆ ಮಾಡುತ್ತಾ ಕುಳಿತಿದ್ದೆವು. ಊರಿಗೆ ಸಂಬಂಧಿಸಿದ ಯಾವುದೇ ವಿವಾಧದ ಬಗ್ಗೆ ವಿಚಾರಣೆ ನಡೆಸಲು ಅಲ್ಲಿಗೆ ಯಲಬುರ್ಗಾದ ಪೊಲೀಸ್ ಸಬ್‌ಇನ್ಸ್‌ಪೆಕ್ಟ್‌ರು ಬಂದರು. ಗ್ರಾಮ ಪಂಚಾಯಿತಿಯಲ್ಲಿ ವಿವಾಧದ ಬಗ್ಗೆ ಚರ್ಚೆ ನಡೆಯುತ್ತಿತ್ತು. ನಮಗೆ ತಿಳಿದು ಬಂದಂತೆ ಅಲ್ಲಿನ ವಿವಾದವು ಒರ್ವ ಮಹಿಳೆಗೆ ಸಂಬಂಧಿಸಿದ್ದಾಗಿತ್ತು. ಹೀಗೆ ಚರ್ಚೆ ನಡೆಯುವ

ಸಂದರ್ಭದಲ್ಲಿ ಗ್ರಾಮಪಂಚಾಯಿತಿ ಸದಸ್ಯರೊಬ್ಬರು ಪೊಲೀಸು ಅಧಿಕಾರಿಗೆ ಸಮಜಾಯಿಷಿ ನೀಡುತ್ತಾ "ಪೊಲೀಸ್ ಸ್ಟೇಷನ್‌ಗೆ ಹೋಗಿದ್ದಾಳೆ ಎಂದ ಮೇಲೆ ಆಕೆ ಯಾವ ಬಗೆಯ ಹೆಣ್ಣು ಎಂಬುದನ್ನು ನೀವೆ ತಿಳಿದುಕೊಳ್ಳಿ ಸಾರ್" ಎಂದು ಹೇಳಿದರು. ಈ ಮಾತುಗಳ ಹಿಂದಿನ ಜನರ ನಂಬಿಕೆ ಏನು ಎಂಬುದು ಬಹಳ ಮುಖ್ಯ. 'ಪೊಲೀಸ್ ಸ್ಟೇಷನ್‌ಗೆ ಹೋಗಿದ್ದಾಳೆ ಎಂದ ಮೇಲೆ ಅವಳು ಯಾವ ಬಗೆಯ ಹೆಣ್ಣು' ಎಂಬ ಮಾತು ಗ್ರಾಮೀಣದಲ್ಲಿ ಜನರು ಮಹಿಳೆಯರನ್ನು ಹೇಗೆ ಪರಿಭಾವಿಸಿಕೊಂಡಿದ್ದಾರೆ ಎಂಬುದಕ್ಕೆ ಪುರಾವೆಯಾಗಿದೆ. 'ಹೆಣ್ಣು ಮನೆಯ ನಾಲ್ಕು ಗೋಡೆ ಬಿಟ್ಟು ಹೊರಗೆ ಹೋಗಬಾರದು' ಎಂಬ ನಂಬಿಕೆಯು ಮೇಲಿನ ಉದ್ಗಾರಕ್ಕೆ ಕಾರಣವಾಗಿದೆ. ಯಾವುದೇ ಅನ್ಯಾಯವಾದರೂ ಹೆಣ್ಣು ಮನೆಯ ನಾಲ್ಕು ಗೋಡೆಗಳ ನಡುವೆ ಸರಿಪಡಿಸಿಕೊಳ್ಳಬೇಕು. ಸಾರ್ವಜನಿಕವಾಗಿ ಮಹಿಳೆಯರು ಸಮಸ್ಯೆಯ ನಿರ್ವಹಣೆಗೆ ಪ್ರಯತ್ನಿಸಬಾರದು ಎಂಬ ನಂಬಿಕೆ ಇಲ್ಲಿ ಕೆಲಸ ಮಾಡುತ್ತಿದೆ. ಪೊಲೀಸ್ ಸ್ಟೇಷನ್‌ಗೆ ಮಹಿಳೆಯರು ಹೋಗಬಾರದು ಎಂಬ ರೀತಿಯ ನಂಬಿಕೆ ಇಲ್ಲಿದೆ, ಅದು ಮಹಿಳೆಯರು ಪ್ರವೇಶಿಸತಕ್ಕ ಸ್ಥಳವಲ್ಲ ಎಂಬ ರೀತಿಯ ಭಾವನೆ ಅವರ ಮಾತುಗಳಲ್ಲಿದೆ. ಈ ಬಗೆಯ ಜನರ ಅಭಿಪ್ರಾಯಗಳಿಗೆ ಪೊಲೀಸು ಅಧಿಕಾರಿ ತಲೆ ತೂಗಿದರೆ ವಿನಾ ಅನ್ಯಾಯದ ವಿರುದ್ಧ ಮಹಿಳೆಯರು ಪೊಲೀಸು ಸ್ಟೇಷನ್‌ನಲ್ಲಿ ಪಿರ್ಯಾದು ಮಾಡಬಹುದು ಎಂಬ ಸಂಗತಿಯನ್ನು ತಿಳಿಹೇಳಲು ಪ್ರಯತ್ನಿಸಲಿಲ್ಲ.

**ಮಹಿಳೆಯರಿಗೆ ಮೀಸಲಾತಿ**

ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ನೆಲೋಗಿ ಗ್ರಾಮದಲ್ಲಿ ಕ್ಷೇತ್ರಕಾರ್ಯ ಮಾಡಬೇಕಾಗಿತ್ತು. ಅದಕ್ಕಾಗಿ ನಮ್ಮ ನಾಲ್ಕು ಜನರ ತಂಡ ಜೇವರ್ಗಿಯ ಪ್ರವಾಸ ಮಂದಿರದಲ್ಲಿ ತಂಗಿತ್ತು. ನಾವು ಅಲ್ಲಿ ತಂಗಿದ್ದ ಸಂದರ್ಭದಲ್ಲಿ ಅದೇ ತಾಲ್ಲೂಕಿಗೆ ಸೇರಿದ ಗುಲಬರ್ಗಾ ಜಿಲ್ಲಾ ಪಂಚಾಯಿತಿಯ ಮಾಜಿ ಅಧ್ಯಕ್ಷರೊಬ್ಬರು ಬಂದಿದ್ದರು. ಜೇವರ್ಗಿ ತಾಲ್ಲೂಕು ಪಂಚಾಯಿತಿಯ ಕಾರ್ಯ ನಿರ್ವಹಣಾಧಿಕಾರಿಗಳು ನಮ್ಮನ್ನು ಅವರಿಗೆ ಪರಿಚಯ ಮಾಡಿಕೊಟ್ಟರು. ಗ್ರಾಮಪಂಚಾಯಿತಿಗಳ ಬಗ್ಗೆ ಅಧ್ಯಯನ ಮಾಡುತ್ತಿರುವ ಸಂಗತಿ ಕೇಳಿ ಅವರು ತಮ್ಮ ವಿಚಾರಗಳನ್ನು ನಮ್ಮ ಜೊತೆ ಹಂಚಿಕೊಂಡರು. ಗ್ರಾಮ ಪಂಚಾಯಿತಿಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡಿರುವುದು, ಅವುಗಳ ಅಧ್ಯಕ್ಷ-ಉಪಾಧ್ಯಕ್ಷ ಸ್ಥಾನಗಳನ್ನು ಅವರಿಗೆ ಮೀಸಲಿಟ್ಟಿರುವುದರ ಬಗ್ಗೆ ಅವರಿಗೆ ತೀವ್ರ ಅಸಮಧಾನವಿತ್ತು. 'ಈ ಮೀಸಲಾತಿಯಿಂದಾಗಿ ಗ್ರಾಮಪಂಚಾಯಿತಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ' ಎಂಬುದು ಅವರ ನಿಲುವಾಗಿತ್ತು. ಇದಕ್ಕೆ ಅವರ ವಿವರಣೆ ಹೀಗಿತ್ತು. ಮಹಿಳೆಯರಿಗೆ ಅಭಿವೃದ್ಧಿ ಬಗ್ಗೆ ಏನೂ ಗೊತ್ತಿಲ್ಲ. ತಾಲ್ಲೂಕು-ಜಿಲ್ಲಾ ಮಟ್ಟದಲ್ಲಿ ಅಧಿಕಾರಿಗಳನ್ನು ಸಂಪರ್ಕಿಸಿ-ಭೇಟಿ ಮಾಡಿ ಕೆಲಸಗಳನ್ನು ಮಾಡಿಸಿಕೊಳ್ಳುವುದು ಅವರಿಗೆ ಸಾಧ್ಯವಿಲ್ಲ. ಇದನ್ನು ತೆಗೆದು ಹಾಕಬೇಕೆಂದು ಗಟ್ಟಿಯಾಗಿ ಪ್ರತಿಪಾದಿಸಿದರು. 'ಪೊಲೀಸು ಸ್ಟೇಷನ್‌ಗೆ ಹೋಗಿದ್ದಾಳೆ ಎಂದ ಮೇಲೆ ಆಕೆ ಯಾವ ಬಗೆಯ ಹೆಣ್ಣು ಎಂಬುದನ್ನು ನೀವೆ

ತಿಳಿದುಕೊಳ್ಳಿ' ಎಂಬ ಹೇಳಿಕೆ ಮತ್ತು ಜಿಲ್ಲಾ ಪಂಚಾಯಿತಿಯ ಹಿಂದಿನ ಅಧ್ಯಕ್ಷರೊಬ್ಬರು 'ಮಹಿಳೆಯರ ಮೀಸಲಾತಿಯಿಂದಾಗಿ ಗ್ರಾಮಪಂಚಾಯಿತಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ'ವೆಂಬ ಅಭಿಪ್ರಾಯ ಏನನ್ನು ಸೂಚಿಸುತ್ತವೆ? ಈ ಬಗೆಯ ನಂಬಿಕೆ-ಮೌಲ್ಯ ವ್ಯವಸ್ಥೆಯಲ್ಲಿ ಮಹಿಳೆಯರ ಸಬಲೀಕರಣ ನಡೆಯಬೇಕಾಗಿದೆ. ಮಹಿಳೆಯರ ಬಗೆಗಿನ ಜನರ ನಂಬಿಕೆಯಲ್ಲಿ ತೀವ್ರ ಬದಲಾವಣೆಗಳಾಗಬೇಕಾಗಿದೆ. ಇದು ಕೇವಲ ಶಾಸನಾತ್ಮಕವಾದ ಸಮಸ್ಯೆಯಲ್ಲ. ಇದೊಂದು ರಾಚನಿಕ ಸಮಸ್ಯೆ-ಮೌಲ್ಯ ವ್ಯವಸ್ಥೆಗೆ ಸಂಬಂಧಿಸಿದ ಸಮಸ್ಯೆ.

**ಮಹಿಳಾ ಸ್ವಸಹಾಯ ಗುಂಪುಗಳು**

ಮಹಿಳೆಯರ ಸಬಲೀಕರಣ ಕಾರ್ಯಕ್ರಮದಡಿಯಲ್ಲಿ ಇಂದು ಹೆಚ್ಚು ಪ್ರಚಾರದಲ್ಲಿ ಹಾಗೂ ಮುಂಚೂಣಿಯಲ್ಲಿರುವ ಕಾರ್ಯಕ್ರಮವೆಂದರೆ 'ಮಹಿಳಾ ಸ್ವಸಹಾಯ ಗುಂಪುಗಳು.' ಅನೇಕ ಕಾರ್ಯಕ್ರಮಗಳಡಿಯಲ್ಲಿ ಅನೇಕ ಪ್ರಾಧಿಕಾರಗಳು ಮಹಿಳೆಯರ ಸ್ವಸಹಾಯ ಗುಂಪುಗಳನ್ನು ಸಂಘಟಿಸುವ ಕೆಲಸದಲ್ಲಿ ನಿರತವಾಗಿವೆ. ಮಹಿಳೆಯರನ್ನು ಸ್ವಾವಲಂಭಿ ಗಳನ್ನಾಗಿ ಮಾಡಬೇಕೆಂಬುದು ಸದರಿ ಕಾರ್ಯಕ್ರಮದ ಮೂಲ ಉದ್ದೇಶವಾಗಿದೆ. ಸ್ತ್ರೀಶಕ್ತಿ, ಸ್ವಶಕ್ತಿ ಎಂಬ ಕಾರ್ಯಕ್ರಮಗಳಡಿಯಲ್ಲಿ ಸ್ವಸಹಾಯ ಗುಂಪುಗಳು ರಚನೆಯಾಗು ತ್ತಿವೆ. ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಸಂಘಟನೆಗಳು, ಸ್ವಯಂ ಸೇವಾ ಸಂಘಟನೆಗಳು ಮಹಿಳೆಯರ ಸ್ವಸಹಾಯ ಗುಂಪುಗಳನ್ನು ರಚಿಸುವ ಕಾರ್ಯದಲ್ಲಿ ನಿರತವಾಗಿವೆ.

ನಮ್ಮ ಅಧ್ಯಯನದ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕು, ಸಂಡೂರು ತಾಲ್ಲೂಕು ಮತ್ತು ಬಳ್ಳಾರಿ ತಾಲ್ಲೂಕುಗಳ ೧೨ ಮಹಿಳಾ ಸ್ವಸಹಾಯ ಗುಂಪುಗಳ ಬಗ್ಗೆ ಮಾಹಿತಿ ಸಂಗ್ರಹಿಸಿದ್ದೇವೆ. ಈ ಗುಂಪುಗಳಲ್ಲಿ ತಲಾ ೫ ರಂತೆ ಒಟ್ಟು ೬೦ ಸದಸ್ಯರ ಸಂದರ್ಶನ ಮಾಡಿದ್ದೇವೆ. ಈ ಗುಂಪುಗಳ ವಿವರವನ್ನು ಕೋಷ್ಟಕ ೩.೭ರಲ್ಲಿ ನೀಡಿದೆ. ಈ ಎಲ್ಲ ಸ್ತ್ರೀಶಕ್ತಿ ಗುಂಪುಗಳು ತಮ್ಮ ಸದಸ್ಯರೊಳಗೆ ಸಾಲ ನೀಡುವ ಕೆಲಸ ಮಾಡುತ್ತಿವೆ. ಬ್ಯಾಂಕಿನ ಮೂಲಕ ಸಾಲವನ್ನು ಸದಸ್ಯರಿಗೆ ಕೊಡಿಸಿಕೊಡುವುದರಲ್ಲೂ ಕೆಲವು ಯಶಸ್ವಿಯಾಗಿವೆ. ಹಣಕಾಸು ವ್ಯವಹಾರವನ್ನು ತುಂಬಾ ಚೆನ್ನಾಗಿ ನಡೆಸುತ್ತಿವೆ. ಅಪಾರ ಬಡ್ಡಿಯನ್ನು ದುಡಿದಿವೆ. ಸದಸ್ಯರ ಉಳಿತಾಯದ ಮೊತ್ತ ಬೆಳೆಯುತ್ತಿದೆ.

ನಮಗೆ ಈ ಗುಂಪುಗಳ ಬಗ್ಗೆ ಅಧ್ಯಯನ ನಡೆಸಬೇಕಾದರೆ ಇದ್ದ ಆಸಕ್ತಿಯೆಂದರೆ ಅವು ಮಹಿಳೆಯರನ್ನು ಎಷ್ಟರ ಮಟ್ಟಿಗೆ 'ಸಬಲೀಕರಣ'ಗೊಳಿಸುತ್ತವೆ ಎಂಬುದನ್ನು ತಿಳಿದುಕೊಳ್ಳುವುದಾಗಿತ್ತು. ಸಬಲೀಕರಣವನ್ನು ನಮ್ಮ ಅಧ್ಯಯನದ ಸಂದರ್ಭದಲ್ಲಿ 'ಕೌಟುಂಬಿಕ ನೀತಿ-ನಿರ್ಣಯದಲ್ಲಿ ಭಾಗವಹಿಸಲು ಅನುವು ಮಾಡಿಕೊಡುವುದು, ಕೌಟುಂಬಿಕ ಲಿಂಗ ಸಂಬಂಧಗಳೆಂದು ಬಗ್ಗೆ ಚರ್ಚೆ ಮಾಡುವುದು, ಕೌಟುಂಬಿಕ ದುಡಿಮೆ ಯನ್ನು ಗಂಡನ ಜೊತೆ ಹಂಚಿಕೊಳ್ಳುವ ಬಗ್ಗೆ ಮಾರ್ಗಗಳನ್ನು ಹುಡುಕಿಕೊಳ್ಳುವುದು ಮುಂತಾದ ಸಂಗತಿಗಳಲ್ಲಿ ಉಂಟಾಗುವ ಬದಲಾವಣೆಗಳು ನಿರ್ವಚಿಸಿಕೊಳ್ಳಲಾಗಿದೆ.

ನಾವು ಅಧ್ಯಯನಕ್ಕೆ ಆಯ್ಕೆ ಮಾಡಿದ ೧೨ ಸ್ತ್ರೀಶಕ್ತಿ ಗುಂಪುಗಳಿಗೆ ಸಂಬಂಧಿಸಿದ ತಲಾ ೫ರಂತೆ ಒಟ್ಟು ೬೦ ಸದಸ್ಯರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಿದ್ದೇವೆ. ಈ ೬೦ ಮಹಿಳೆಯರು ತಮ್ಮ

**ಕೋಷ್ಟಕ ೩.೭**

**ಆಯ್ದ ಮಹಿಳಾ ಸ್ವಸಹಾಯ ಗುಂಪುಗಳು**

| |
|---|
| ೧. ಅನ್ನಪೂರ್ಣೇಶ್ವರಿ ಸ್ತ್ರೀಶಕ್ತಿ ಸ್ವಸಹಾಯ ಗುಂಪು, ಕೊರ್ಲಗುಂದಿ, ಬಳ್ಳಾರಿ ತಾಲ್ಲೂಕು |
| ೨. ಬನ್ನಿಕಾಳಮ್ಮ ಸ್ತ್ರೀಶಕ್ತಿ ಸ್ವಸಹಾಯ ಗುಂಪು, ರಾಮಸಾಗರ, ಹೊಸಪೇಟೆ ತಾಲ್ಲೂಕು |
| ೩. ಶಾರದ ಸ್ವಸಹಾಯ ಗುಂಪು, ರಾಮಸಾಗರ, ಹೊಸಪೇಟೆ ತಾಲ್ಲೂಕು |
| ೪. ಶ್ರೀ ಲಕ್ಷ್ಮಿ ಸ್ತ್ರೀಶಕ್ತಿ ಗುಂಪು, ನಂ.೧೦ ಮುದ್ದಾಪುರ, ಹೊಸಪೇಟೆ ತಾಲ್ಲೂಕು |
| ೫. ಶ್ರೀ ಮಹೇಶ್ವರಿ ಮಹಿಳಾ ಸ್ವಸಹಾಯ ಗುಂಪು, ರಾಮಸಾಗರ, ಹೊಸಪೇಟೆ ತಾಲ್ಲೂಕು |
| ೬. ಶ್ರೀ ಬಸವೇಶ್ವರಿ ಸ್ತ್ರೀಶಕ್ತಿ ಸ್ವಸಹಾಯ ಗುಂಪು, ನಂ.೧೦ ಮುದ್ದಾಪುರ, ಹೊಸಪೇಟೆ ತಾಲ್ಲೂಕು |
| ೭. ಶ್ರೀ ಕೆಂಪಾಂಬಿಕ ಸ್ತ್ರೀ ಶಕ್ತಿ ಸ್ವಸಹಾಯ ಗುಂಪು, ನಂ.೧೦ ಮುದ್ದಾಪುರ, ಹೊಸಪೇಟೆ ತಾಲ್ಲೂಕು |
| ೮. ಶ್ರೀ ಬಸವೇಶ್ವರಿ ಮಹಿಳಾ ಸ್ವಸಹಾಯ ಗುಂಪು, ಕೊರ್ಲಗುಂದಿ, ಬಳ್ಳಾರಿ ತಾಲ್ಲೂಕು |
| ೯. ಅಖಿಲಭಾರತ ಸ್ತ್ರೀಶಕ್ತಿ ಗುಂಪು, ದೌಲತ್‌ಪುರ, ಸಂಡೂರು ತಾಲ್ಲೂಕು. |
| ೧೦. ಐಶ್ವರ್ಯ ಸ್ತ್ರೀಶಕ್ತಿ ಸ್ವಸಹಾಯ ಗುಂಪು, ಕೃಷ್ಣನಗರ, ಸಂಡೂರು ತಾಲ್ಲೂಕು |
| ೧೧. ರೇಷ್ಮಾ ಸ್ತ್ರೀಶಕ್ತಿ ಗುಂಪು, ಕೃಷ್ಣನಗರ, ಸಂಡೂರು ತಾಲ್ಲೂಕು |
| ೧೨. ರಜನಿ ಸ್ತ್ರೀಶಕ್ತಿ ಸ್ವಸಹಾಯ ಗುಂಪು, ಕೃಷ್ಣನಗರ ಸಂಡೂರು ತಾಲ್ಲೂಕು |

ಗುಂಪಿನ ಹಣಕಾಸು ವ್ಯವಹಾರದ ಬಗ್ಗೆ ನಮ್ಮ ಜೊತೆ ಮಾತನಾಡಿದರೆ ವಿನಾ ಮಹಿಳೆಯರ 'ಸಂಘರ್ಷಣಾತ್ಮಕ' ಸಂಗತಿಗಳ ಬಗ್ಗೆ ಮಾತನಾಡಲಿಲ್ಲ. ಅದರ ಬಗ್ಗೆ ಅವರಿಗೆ ಹೆಚ್ಚಿನ ಆಸಕ್ತಿಯಿದ್ದಂತೆ ಕಾಣಲಿಲ್ಲ. ಸ್ತ್ರೀಶಕ್ತಿ ಗುಂಪುಗಳ ವಾರದ ಸಭೆಗಳಲ್ಲಿ ಹಣಕಾಸು ವ್ಯವಹಾರದ ಬಗ್ಗೆ ಮಾತ್ರ ಚರ್ಚೆಮಾಡುವುದಾಗಿ ತಿಳಿಸಿದ್ದಾರೆ. 'ಸ್ತ್ರೀಶಕ್ತಿ' ಗುಂಪುಗಳು ಮಹಿಳಾ ಸಂಘಟನೆಗಳಾಗಿ ಲಿಂಗ ಸಮಾನತೆ ಸಾಧಿಸಿಕೊಳ್ಳುವ ದಿಶೆಯಲ್ಲಿ ಪ್ರಯತ್ನ ನಡೆಸಬೇಕು ಎಂಬುದು ಸದರಿ ಯೋಜನೆಯ ಮೂಲದಲ್ಲಿದ್ದ ಆಶಯವಾಗಿದೆ. ಮಹಿಳಾ ಸ್ವಸಹಾಯ ಗುಂಪುಗಳ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವು

ಅಸ್ತಿತ್ವದಲ್ಲಿರುವ ಲಿಂಗಸಂಬಂಧಿ ಮೌಲ್ಯ ವ್ಯವಸ್ಥೆಯನ್ನು ಪುನರುತ್ಪಾದಿಸುತ್ತಿರುವಂತೆ ಮತ್ತು ಅದನ್ನು ಊರ್ಜಿತಗೊಳಿಸುತ್ತಿರುವಂತೆ ಕಾಣುತ್ತದೆ.

ಮಹಿಳೆಯರಿಗೆ ಸ್ವತಂತ್ರವಾದ ವರಮಾನದ ಮೂಲವನ್ನು ಒದಗಿಸುವುದು ಮಹಿಳಾ ಸ್ವಸಹಾಯ ಗುಂಪುಗಳ ಮೂಲದಲ್ಲಿರುವ ಒಂದು ಉದ್ದೇಶವಾಗಿದೆ. ಮಹಿಳೆಯರು ಸ್ವಾವಲಂಬಿಗಳಾಗಬೇಕು ಎಂಬುದು ಇಲ್ಲಿನ ಉದ್ದೇಶವಾಗಿದೆ. ಈ ಕಾರಣದಿಂದಾಗಿ ಸದರಿ ಕಾರ್ಯಕ್ರಮವನ್ನು 'ಸಬಲೀಕರಣ' ಕಾರ್ಯಕ್ರಮವೆಂದು ಕರೆಯಲಾಗಿದೆ. ಮಹಿಳೆಯರನ್ನು ಹೆಚ್ಚು ಹೆಚ್ಚು 'ಸಾರ್ವಜನಿಕ'ಗೊಳಿಸುವ, ಸಾರ್ವಜನಿಕ ಕ್ಷೇತ್ರ ಪ್ರವೇಶಿಸುವಂತೆ ಮಾಡುವ ಮೂಲಕ ಅವರನ್ನು ಸಬಲರನ್ನಾಗಿ ಮಾಡಬಹುದು ಎಂದು ನಂಬಲಾಗಿದೆ. ಇಲ್ಲಿ ಮಹಿಳೆಯರಿಗೆ ಹೆಚ್ಚಿನ ಒತ್ತುದೊರಕಿದೆ. ಮಹಿಳೆಯರು ಒಂದು ಅರ್ಥದಲ್ಲಿ 'ವಿಸಿಬಲ್' ಆಗುತ್ತಿದ್ದಾರೆ. ಪ್ರಧಾನಧಾರೆ ಆರ್ಥಿಕತೆಯಲ್ಲಿ ಮಹಿಳೆಯರನ್ನು ಸಂಯೋಜಿಸುವ ಕೆಲಸ ಇಲ್ಲಿ ನಡೆದಿದೆ. ಗ್ರಾಮಪಂಚಾಯಿತಿಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡುವ ಕ್ರಮವನ್ನೂ ಸಬಲೀಕರಣ ಕಾರ್ಯಕ್ರಮವೆಂದು ಪರಿಗಣಿಸ ಬಹುದಾಗಿದೆ.

ಈ ಎಲ್ಲ ಕ್ರಮಗಳು-ಕಾರ್ಯಕ್ರಮಗಳ ಅರ್ಥವೇನು? ಈ ಬಗೆಯ ಬದಲಾವಣೆಗಳನ್ನು ಹೇಗೆ ಅರ್ಥ ಮಾಡಿಕೊಳ್ಳುವುದು? ಮಹಿಳೆಯರನ್ನು ಹೀಗೆ ಸಾರ್ವಜನಿಕಗೊಳಿಸುತ್ತಿರು ವುದರಿಂದ ಉಂಟಾಗುತ್ತಿರುವ ಬದಲಾವಣೆಗಳೇನು?

ಮಹಿಳಾ ಸಬಲೀಕರಣ ಕಾರ್ಯಕ್ರಮಗಳು ಮಹಿಳೆಯರ ಸ್ಥಿತಿಗತಿ ಹಾಗೂ ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಕೇವಲ 'ನೋಶನಲ್ ' ಆದಂತಹ ಬದಲಾವಣೆಗಳನ್ನು ತರುತ್ತಿವೆಯೆಂದು ಹೇಳಬಹುದು. ಲಿಂಗಸಂಬಂಧಗಳನ್ನು ಕುರಿತಂತೆ 'ಕ್ರಿಟಿಕಲ್ ' ಸ್ವರೂಪದ ಬದಲಾವಣೆಗಳನ್ನು ಉಂಟುಮಾಡುವುದು ಅವುಗಳಿಂದ ಸಾಧ್ಯವಾಗುತ್ತಿಲ್ಲ. ಮಹಿಳೆಯರ ಸಬಲೀಕರಣವನ್ನು ಇಲ್ಲಿ ಏಕಪಕ್ಷೀಯವಾಗಿ ಪರಿಭಾವಿಸಿಕೊಂಡಿರುವಂತೆ ಕಾಣುತ್ತದೆ. ಮಹಿಳಾ ಸ್ವಸಹಾಯ ಗುಂಪುಗಳಲ್ಲಿ ಉಳಿತಾಯ-ಬಡ್ಡಿ-ಸಾಲ-ಮರುಪಾವತಿ ಗಳನ್ನು ಕುರಿತ ಹಣಕಾಸು ವ್ಯವಹಾರ ಇಲ್ಲಿ ಮುಖ್ಯವಾಗಿ ಬಿಟ್ಟು ಲಿಂಗ ಸಂಬಂಧಗಳನ್ನು ಕುರಿತ-ಅಲ್ಲಿನ ಅಧಿಕಾರ ಸಂಬಂಧಗಳನ್ನು ಕುರಿತ ಚರ್ಚೆ ಗೈರುಹಾಜರಾಗಿಬಿಟ್ಟಿದೆ.

ಈಗ ಸದ್ಯ ಮಹಿಳೆಯರು ಪುರುಷಶಾಹಿ ಆಳ್ವಿಕೆಗೆ ಒಳಗಾಗಿದ್ದಾರೆ. ಮಹಿಳಾ ಸ್ವಸಹಾಯ ಗುಂಪುಗಳ ಮೂಲಕ, ಅವರನ್ನು ಬಂಡವಾಳಶಾಹಿ ತೆಕ್ಕೆಗೆ ಹಾಕುವಂತಹ ತಂತ್ರ ಇಲ್ಲಿರುವಂತೆ ನನಗೆ ಕಾಣುತ್ತಿದೆ. ಅಂದರೆ ಮಹಿಳೆಯರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಹಭಾಗಿಗಳಾಗುವ ಮೂಲಕ 'ಬಾಣಲೆಯಿಂದ ಬೆಂಕಿಗೆ' ಎಂಬಂತಹ ಸ್ಥಿತಿ ಎದುರಿಸಬೇಕಾಗಿ ಬಂದಿದೆ. ಸ್ತ್ರೀಶಕ್ತಿ, ಸ್ವಶಕ್ತಿಯಂತಹ ಕಾರ್ಯಕ್ರಮಗಳು ಮಹಿಳೆಯರನ್ನು ಅವರ ಸ್ಥಾನ ಮಾನಗಳನ್ನು, ಲಿಂಗಸಂಬಂಧಗಳನ್ನು ಏಕಪಕ್ಷೀಯವಾಗಿ ನೋಡುತ್ತಿರುವಂತೆ ಭಾಸವಾಗು ತ್ತದೆ. ಈಗಾಗಲೇ ಹೇಳಿರುವಂತೆ ಇಲ್ಲಿ ಮಹಿಳೆಯರು ಫಲಗಳನ್ನು ಸ್ವೀಕರಿಸುವ

ಫಲಾನುಭವಿಗಳಾಗಿದ್ದಾರೆ. ಮಹಿಳೆಯರನ್ನು ಸಂಬಂಧವಾದಿ-ಸಂದರ್ಭವಾದಿ ನೆಲೆಯಿಂದ ಅಲಾಯದ ಮಾಡಿ ನೋಡುವ ಕ್ರಮ ಇಲ್ಲಿದೆ. ಪುರುಷರ-ಪುರುಷಶಾಹಿಯ ಜೊತೆಗಿನ ಮಹಿಳೆಯರ ಸಂಬಂಧವನ್ನು ಬಿಟ್ಟು ಸ್ವತಂತ್ರವಾಗಿ ಅವರನ್ನು ನೋಡುವುದು ಹೇಗೆ? ಆಸ್ತಿಗೆ ಸಂಬಂಧಿಸಿದ ಅವರ ಹಕ್ಕು ಬಾಧ್ಯತೆಗಳ ಸಂಗತಿಯನ್ನು ಬಿಟ್ಟು ಮಹಿಳೆಯರನ್ನು ಪರಿಭಾವಿಸಿಕೊಳ್ಳುವುದು ಹೇಗೆ? ದುಡಿಮೆಯು ಮಹಿಳೀಕರಣಕ್ಕೆ ಒಳಗಾಗಿರುವ ಇಂದಿನ ಸಂದರ್ಭದಲ್ಲಿ ಅವರ ದುಡಿಮೆಗೆ ಸಂಬಂಧಿಸಿದ ಸಂಗತಿಗಳನ್ನು ಚರ್ಚೆಯ ಚೌಕಟ್ಟಿಗೆ ತರದೆ ಇರುವುದು ಹೇಗೆ?

ಮಹಿಳೆಯರ - ಲಿಂಗ ಸಂಬಂಧಗಳ ಬಹುಮುಖಿ ಸಂಗತಿಗಳನ್ನು, ಅಲ್ಲಿನ ಅಧಿಕಾರ ಸಂಬಂಧಗಳನ್ನು, 'ಪೊಲೀಸು ಸ್ಟೇಷನ್‌ಗೆ ಹೋಗಿದ್ದಾಳೆ ಎಂದ ಮೇಲೆ ಅವಳು ಯಾವ ಬಗೆಯ ಹೆಣ್ಣು ಎಂಬುದನ್ನು ನೀವೆ ತಿಳಿದುಕೊಳ್ಳಿ' ಎಂಬ ಉದ್ಗಾರ ಪ್ರತಿನಿಧಿಸುವ ಮೌಲ್ಯ ವ್ಯವಸ್ಥೆಯನ್ನು ಗಣನೆಗೆ ತೆಗೆದುಕೊಳ್ಳದೆ ಮಹಿಳೆಯರ ಅಭಿವೃದ್ಧಿಯನ್ನು, ಅವರ ಸ್ವಾವಲಂಬನೆಯನ್ನು ಸಾಧಿಸುವುದು ಹೇಗೆ? ಈ ಸಂಗತಿಗಳನ್ನೆಲ್ಲಾ ಮೂಲೆಗೆ ಸರಿಸಿ, ಮಹಿಳೆಯರ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುತ್ತಿರುವ ಪರಿಯನ್ನು ನೋಡಿದರೆ, ಮಹಿಳೆಯರು ಇಂದು ಎದುರಿಸುತ್ತಿರುವ ತಾರತಮ್ಯ-ಪಕ್ಷಪಾತಗಳನ್ನು ಮುಂದುವರಿಸುವ ತಂತ್ರಗಳು ಇವು ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ.

ಮಹಿಳೆಯರ ಅಭಿವೃದ್ಧಿಯನ್ನು ಸಂಘರ್ಷವಾದಿ ನೆಲೆಯಲ್ಲಿ, ಸಂಘಟನಾವಾದಿ ಸ್ವರೂಪದಲ್ಲಿ ಪರಿಭಾವಿಸಿ ಕೊಳ್ಳದಿರುವ ಪರಿಯಲ್ಲಿ ಅವರ ಅಭಿವೃದ್ಧಿಗೆ ಸಂಬಂಧಿಸಿದ ವೈಫಲ್ಯವನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಮಹಿಳೆಯರ ಅಭಿವೃದ್ಧಿಯನ್ನು ಸಂಘರ್ಷವಾದಿ-ಸಂಘಟನಾವಾದಿ ನೆಲೆಯಲ್ಲಿ ಪರಿಭಾವಿಸಿಕೊಳ್ಳಲು ಸಾಧ್ಯವಾಗದಿರುವ ಸಂಗತಿಯನ್ನೇ 'ರಾಜಕೀಯ ವೈಫಲ್ಯ'ವೆಂದು ಕರೆಯಲಾಗಿದೆ. ಮಹಿಳಾ ಸ್ವಸಹಾಯ ಗುಂಪಿನ ಕಾರ್ಯಕ್ರಮ ಯಶಸ್ವಿಯಾಗಬಹುದು. ಆದರೆ ಇದರಿಂದ ಮಹಿಳೆಯರ ಸಮಸ್ಯೆಗಳು, ಲಿಂಗ ಅಸಮಾನತೆಗಳು ಮಾಯವಾಗುತ್ತದೆ ಎಂದು ನಿರೀಕ್ಷಿಸುವುದು ಸಾಧ್ಯವಿಲ್ಲ.

ಗ್ರಾಮಪಂಚಾಯಿತಿ ಮಟ್ಟದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರಿಗೆ ಸಂಬಂಧಪಟ್ಟ ಮೂಲಭೂತ ಪ್ರಶ್ನೆಗಳನ್ನು ಪರಿಹರಿಸುವುದರಲ್ಲಿ ವಿಫಲವಾಗಿದೆ. ಇದನ್ನು ಹೀಗೆ ಹೇಳುವುದು ಸರಿಯೆಂದು ಕಾಣುತ್ತದೆ. ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಮೂಲದಲ್ಲಿ ಲಿಂಗ ಸಂಬಂಧಗಳನ್ನು ಕುರಿತಾದ ಮೂಲಭೂತ-ಸಾರಸತ್ವ ಪ್ರಶ್ನೆಗಳೇ ಇಲ್ಲದಿರುವುದರಿಂದ ಅವು ಅವರ ಸಮಸ್ಯೆಯನ್ನು ಪರಿಹರಿಸುವುದು ಸಾಧ್ಯವಿಲ್ಲ. ಈ ಬಗೆಯ ರಾಜಕೀಯ ವೈಫಲ್ಯ ಕುರಿತಂತೆ ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಹೀಗೆ ಬರೆಯುತ್ತಾರೆ.

"......the agency of women can never be adequately free if traditionally discreminatory values remain unexamined and unscrutrinised. While values may be culturally influenced, it is possible to over come the barriers of inequality imposed by tradition through greater freedom to question, doubt and if convinced, reject"(2002:274)

### ೩ಈ. ಅನುಸಂಧಾನತ್ವವಾದಿ-ಪ್ರಜಾಪ್ರಭುತ್ವ-ವಿಕೇಂದ್ರೀಕರಣ

ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಕೂಡಿ ಇತ್ತೀಚೆಗೆ ಪ್ರಕಟಿಸಿರುವ ಒಂದು ಗ್ರಂಥದಲ್ಲಿ (೨೦೦೨:೩೭೯) ಪ್ರಜಾಪ್ರಭುತ್ವವನ್ನು 'ಅನುಸಂಧಾನತ್ವವಾದಿ ಸರ್ಕಾರ'ವೆಂದು ನಿರ್ವಚಿಸಿದ್ದಾರೆ. ಅವರ ಮಾತುಗಳಲ್ಲೆ ಹೇಳುವುದಾದರೆ 'democracy is goverment by discussion.' ಕೇರಳ ರಾಜ್ಯದಲ್ಲಿ ೧೯೯೬ರಲ್ಲಿ ಆರಂಭವಾದ 'ವಿಕೇಂದ್ರೀಕರಣ ಯೋಜನೆಗಾಗಿ ಜನರ ಆಂದೋಳನ'ದ ರೂವಾರಿಯಾಗಿದ್ದ ಥಾಮಸ್ ಇಸಾಕ್‌ರವರು ಪ್ರಜಾಪ್ರಭುತ್ವವನ್ನು ಎರಡು ವಿಧಗಳಾಗಿ ವಿಂಗಡಿಸುತ್ತಾರೆ.(೨೦೦೦:೬)[೧೦]

೧. ಸಬಲೀಕರಣಗೊಂಡ ಅನುಸಂಧಾನತ್ವವಾದಿ ಪ್ರಜಾಪ್ರಭುತ್ವ

೨. ಪ್ರಾತಿನಿಧಿಕ-ತಾಂತ್ರಿಕ-ನೌಕರಶಾಹಿವಾದಿ ಪ್ರಜಾಪ್ರಭುತ್ವ.

ಅನುಸಂಧಾನತ್ವವನ್ನು ಡ್ರೀಜ್-ಸೇನ್ ಹಾಗೂ ಇಸಾಕ್ ಅವರುಗಳು ಪ್ರಜಾಪ್ರಭುತ್ವದ ಒಂದು ಅಗತ್ಯ ಗುಣವಾಗಿ ಗುರುತಿಸಿದ್ದಾರೆ. ಅನುಸಂಧಾನ (ಡಿಲಿಬರೇಟಿವ್‌ನೆಸ್) ಮತ್ತು ಸಂವಾದ(ಡಿಸ್‌ಕಶನ್) ಇವು ಪ್ರಜಾಪ್ರಭುತ್ವದ ಗುಣಗಳು. ಪ್ರಜಾಪ್ರಭುತ್ವವೆನ್ನುವುದು ಪ್ರಾತಿನಿಧಿಕ ಸ್ವರೂಪ ಪಡೆದಿರಬಹುದು. ಆದರೆ ಅದು ಕೇವಲ ಔಪಚಾರಿಕವಾದ ಪ್ರಾತಿನಿಧಿತ್ವವಾಗಿರಬಹುದು. ತಾಂತ್ರಿಕವಾಗಿ ಅದು ಪ್ರಜಾಪ್ರಭುತ್ವದ ಎಲ್ಲ ನಿಯಮಗಳನ್ನು ಪಾಲಿಸುತ್ತಿರಬಹುದು. ಆದರೆ ಅಲ್ಲಿ ಅನುಸಂಧಾನಕ್ಕೆ-ಸಂವಾದಕ್ಕೆ ಅವಕಾಶವಿಲ್ಲದಿದ್ದರೆ ಅಲ್ಲಿ ಪ್ರಜಾಪ್ರಭುತ್ವವು 'ಜನರಿಗಾಗಿ' ಇರಲು ಸಾಧ್ಯವಿಲ್ಲ. ಈ ಬಗೆಯ ತಾಂತ್ರಿಕವಾಗಿ ಎಲ್ಲ ಅಗತ್ಯಗಳನ್ನು ಪೂರೈಸಬಲ್ಲ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅನೂಚಾನವಾಗಿ ಹರಿದುಕೊಂಡು ಬಂದಿರುವ ಸಾಮಾಜಿಕ ಅಸಮಾನತೆಗಳು ಗಟ್ಟಿಯಾಗಿ ಉಳಿದುಕೊಂಡು ಬಿಡುವ ಸಾಧ್ಯತೆಯಿದೆ. ಕೇವಲ ತಾಂತ್ರಿಕ ನೆಲೆಯಲ್ಲಿ ಪ್ರಜಾಪ್ರಭುತ್ವವಾಗಿರುವ ವ್ಯವಸ್ಥೆಯು ಸಮಾಜದ ಎಲ್ಲ ಜನರನ್ನು ಒಳಗೊಳ್ಳುವ ಸಾಧ್ಯತೆ ಕಡಿಮೆ. ಇಂತಹ ಪ್ರಜಾ ಪ್ರಭುತ್ವದ ಹರವು ತುಂಬಾ ಸೀಮಿತವಾಗಿರುತ್ತದೆ.

ಪ್ರಸ್ತುತ ಭಾಗದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ ಪ್ರಕ್ರಿಯೆಯನ್ನು ಪ್ರಜಾಪ್ರಭುತ್ವದ ಮಾನದಂಡದಿಂದ ಮೌಲ್ಯಮಾಪನ ಮಾಡಲು ಪ್ರಯತ್ನಿಸಲಾಗಿದೆ. ಗ್ರಾಮೀಣ ಅಭಿವೃದ್ಧಿ ಹಾಗೂ ವಿಕೇಂದ್ರೀಕರಣ ಪ್ರಕ್ರಿಯೆಗಳು ಎಷ್ಟರ ಮಟ್ಟಿಗೆ ಜನತಾಂತ್ರಿಕವಾಗಿವೆ? ಅವುಗಳ ಪ್ರಜಾಪ್ರಭುತ್ವವಾದಿ ಚಾಚು ಎಷ್ಟು ನೀಳವಾದುದಾಗಿದೆ? ಅದರ ಹರವು ಸಂಕುಚಿತವಾದುದೋ ಅಥವಾ ವಿಸ್ತೃತವಾದುದೋ? -ಇವೆ ಮುಂತಾದ

ಪ್ರಶ್ನೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳಿಗೆ ಸಂಬಂಧಿಸಿದಂತೆ ಕಂಡುಬರುವ ಮುಖ್ಯ ಸಂಗತಿಯೆಂದರೆ 'ಅನುಸಂಧಾನತ್ವದ' ಕೊರತೆ. ಸಹಭಾಗಿತ್ವವಾದಿ ಅಭಿವೃದ್ಧಿ ಬಗ್ಗೆ ಮಾತನಾಡಲಾಗುತ್ತಿದೆ. ಆದರೆ ವಾಸ್ತವವಾಗಿ ಅಲ್ಲಿರುವುದೇನು? ಅನುಸಂಧಾನತ್ವದ ಕೊರತೆಗೆ ಸಂಬಂಧಿಸಿದಂತೆ ನಮ್ಮ ಅನುಭವಕ್ಕೆ ಬಂದ ಒಂದು ಸಂಗತಿಯನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

**ಗ್ರಾಮಸಭೆ-ಓಣಿ ಸಭೆ**

ಕರ್ನಾಟಕದ ಪಂಚಾಯತ್ ರಾಜ್ ಕಾಯಿದೆ ಪ್ರಕಾರ ಗ್ರಾಮಪಂಚಾಯಿತಿಗಳು ತಮ್ಮ ವ್ಯಾಪ್ತಿಯ ಹಳ್ಳಿಗಳಲ್ಲಿ ಜನರ ಅಭಿಲಾಷೆಯನ್ನು ಹಿಡಿದಿಡುವ ಸಲುವಾಗಿ ಗ್ರಾಮಸಭೆಗಳನ್ನು ನಡೆಸುವುದು ಕಡ್ಡಾಯವಾಗಿದೆ. ಪಂಚಾಯತ್ ರಾಜ್ ವ್ಯವಸ್ಥೆ ಹೇಗೆ ಕೆಲಸ ಮಾಡುತ್ತಿದೆ ಎಂಬುದರ ನೇರ ಅನುಭವವಿರುವವರಿಗೆ ಚೆನ್ನಾಗಿ ಗೊತ್ತಿದೆ, ಗ್ರಾಮಸಭೆ ಎನ್ನುವುದು ಕೇವಲ 'ನಾಟಕ' ಎಂದು. ತಾತ್ವಿಕವಾಗಿಯೇ ಗ್ರಾಮ ಸಭೆ ಎಂಬುದು ಅನುಷ್ಠಾನ ಯೋಗ್ಯವಾದ ಒಂದು ಕ್ರಮವಾಗಿಲ್ಲ. ಒಂದು ಸರಾಸರಿ ಗ್ರಾಮದಲ್ಲಿ ಕನಿಷ್ಟವೆಂದರೂ ೨೦೦೦-ಕ್ಕಿಂತ ಅಧಿಕ ಜನಸಂಖ್ಯೆಯಿರುತ್ತದೆ. ಗ್ರಾಮದ ಎಲ್ಲ ಮತದಾರರು ಗ್ರಾಮಸಭೆಯ ಸದಸ್ಯರು. ಒಂದು ವೇಳೆ ಗ್ರಾಮವೊಂದರ ಎಲ್ಲ ಮತದಾರರು ಗ್ರಾಮಸಭೆಗೆ ಹಾಜರಾದರೆ, ಅಂದರೆ ಸುಮಾರು ೨೦೦೦ ಜನ ಒಟ್ಟಿಗೆ ಸೇರಿದರೆ ಅಲ್ಲಿ ಸಂವಾದ-ಅನುಸಂಧಾನತ್ವ ಸಾಧ್ಯವೇ? ನಿಜಕ್ಕೂ ಅಸಾದ್ಯ. ಒಂದು ಗ್ರಾಮಸಭೆಯಲ್ಲಿ ಗ್ರಾಮಪಂಚಾಯಿತಿಯ ಬಜೆಟ್ಟು, ವಾರ್ಷಿಕ ಅಭಿವೃದ್ಧಿ ಯೋಜನೆ ಹೀಗೆ ಎಲ್ಲವೂ ಅನುಮೋದನೆ ಪಡೆದುಕೊಳ್ಳಬೇಕು. ಸುಮಾರು ೨೦೦೦ ಜನರು ಕೂಡಿರುವ ಸಭೆಯಲ್ಲಿ ಎಂಥಹ ಚರ್ಚೆ ಸಾಧ್ಯ ಹೇಳಿ?

ಗ್ರಾಮಸಭೆ ಎಂಬುದನ್ನು ಕಾಯಿದೆಯಲ್ಲಿ ಸೇರಿಸಲಾಗಿದೆ. ಅಂದ ಮೇಲೆ ಅದನ್ನು ನಡೆಸಬೇಕು. ವಾಸ್ತವವಾಗಿ ಅದೊಂದು ವ್ಯವಹಾರಿಕವಾದ ಕ್ರಮವಲ್ಲ.

ಈ ಸಂಗತಿಯನ್ನು ಗಮನದಲ್ಲಿಟ್ಟುಕೊಂಡು ನಾವು ಪ್ರಾಯೋಗಿಕವಾಗಿ ಸಂಡೂರು ತಾಲ್ಲೂಕಿನ(ಬಳ್ಳಾರಿ ಜಿಲ್ಲೆ) ಕೃಷ್ಣನಗರ ಗ್ರಾಮಪಂಚಾಯಿತಿಯಲ್ಲಿ ಜನರ ಅಗತ್ಯಗಳೇನು, ಅವರ ಸಮಸ್ಯೆಗಳೇನು, ಅವುಗಳನ್ನು ಜನರು ಹೇಗೆ ಪರಿಹರಿಸಿಕೊಳ್ಳಲು ಬಯಸುತ್ತಾರೆ ಎಂಬ ಸಂಗತಿಗಳನ್ನು ತಿಳಿದುಕೊಳ್ಳುವ ಸಲುವಾಗಿ ಗ್ರಾಮಸಭೆಗೆ ಪ್ರತಿಯಾಗಿ 'ವಸತಿ ಸಭೆ'ಗಳನ್ನು ಮಾಡಿದೆವು. ನಾವು ನಿಜವಾಗಿ ಮಾಡಿದ್ದು ಓಣಿಸಭೆ. ಪ್ರತಿಯೊಂದು ಮುಖ್ಯ ಓಣಿಯಲ್ಲಿ ಸುಮಾರು ನೂರು ಜನರನ್ನು ಕಲೆ ಹಾಕಿ ಅಭಿವೃದ್ಧಿ ಬಗ್ಗೆ, ಸಂಪನ್ಮೂಲದ ಬಗ್ಗೆ, ಓಣಿಯ ಅಗತ್ಯಗಳ ಬಗ್ಗೆ ಚರ್ಚೆ ನಡೆಸಿದೆವು.

ಇಂತಹ ಸಭೆಗಳಿಗೆ ಸದರಿ ಓಣಿಗೆ ಸೇರಿದ ಪಂಚಾಯಿತಿ ಸದಸ್ಯರು ಓಣಿಸಭೆಗಳಲ್ಲಿ ಹಾಜರಿರಬೇಕೆಂಬುದು ನಮ್ಮ ಸಂಶೋಧನ ತಂಡದ ಅಪೇಕ್ಷೆಯಾಗಿತ್ತು. ಈ ಬಗ್ಗೆ ಎಲ್ಲ

ಸದಸ್ಯರಿಗೂ ನಾವು ಮೊದಲೇ ತಾಕೀತು ಮಾಡುತ್ತಿದ್ದೆವು. ಇಂತಹ ಒಂದು ಕಾರ್ಯ ಯೋಜನೆಯನ್ನು ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಯರೆಹಂಚನಾಳ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ನಡೆಸಿದೆವು. ಆದರೆ ನಮ್ಮ ಒತ್ತಾಯವನ್ನು ಗ್ರಾಮಪಂಚಾಯಿತಿ ಸದಸ್ಯರು ಮನ್ನಿಸಲಿಲ್ಲ. ಯಾರೊಬ್ಬರೂ ಅಲ್ಲಿ ಓಣಿಸಭೆಗೆ ಬರಲಿಲ್ಲ. ಕೆಲವು ಸದಸ್ಯರನ್ನು ಈ ಬಗ್ಗೆ ನಾವು ಪ್ರಶ್ನೆ ಮಾಡಿದೆವು. ನಮ್ಮ ಪ್ರಶ್ನೆಗೆ ಒರ್ವ ಸದಸ್ಯರು ನೀಡಿದ ಉತ್ತರ ಕುತೂಹಲಕಾರಿಯಾಗಿತ್ತು. ಅವರು ಹೇಳಿದರು 'ನಾವು ಸಭೆಗೆ ಬಂದರೆ ಓಣಿಯ ಹೆಣ್ಣು ಮಕ್ಕಳು ಸಭೆಗೆ ಬರೋದಿಲ್ಲ, ಅದಕ್ಕೆ ನಾವು ಅಲ್ಲಿ ಬಂದಿಲ್ಲ.' ಇದು ಅವರ ಹೇಳಿಕೆ. ಓಣಿಸಭೆಗೆ ಬಾರದಿರಲು ಇದು ಕಾರಣ. ಈ ಉತ್ತರ ನಾವು ತಿಳಿದುಕೊಂಡಿರುವಂತೆ ಅಥವಾ ಅದು ತೋರುವಂತೆ ಸರಳವಾದ ಉತ್ತರವಲ್ಲ! ಈ ಉತ್ತರ ಗ್ರಾಮೀಣ ಪ್ರದೇಶದಲ್ಲಿರುವ ಪ್ರಜಾಪ್ರಭುತ್ವದ ಸ್ವರೂಪದ ಬಗ್ಗೆ ಬೆಳಕು ಚೆಲ್ಲುತ್ತದೆ. ಲಿಂಗ ಸಂಬಂಧಗಳ ಸ್ವರೂಪದ ಬಗ್ಗೆಯೂ ಅದು ಅರ್ಥಪೂರ್ಣವಾಗಿದೆ. ಗ್ರಾಮಪಂಚಾಯಿತಿ ಸದಸ್ಯರು ಮತ್ತು ಊರಿನ ಮಹಿಳೆಯರ ನಡುವಿನ ಸಂಬಂಧ ಯಾವ ಬಗೆಯದು ಎಂಬುದರ ಬಗ್ಗೆ ಇದು ಸೂಚನೆ ನೀಡುತ್ತಿದೆ. ಸಭೆಗಳಲ್ಲಿ ಮಹಿಳೆಯರ ಜೊತೆ ಗ್ರಾಮ ಪಂಚಾಯಿತಿ ಸದಸ್ಯರಿಗೆ ಅನುಸಂಧಾನ ಸಾಧ್ಯವಿಲ್ಲವೆನ್ನುವುದಾದರೆ ಆ ವ್ಯವಸ್ಥೆ ಎಷ್ಟರ ಮಟ್ಟಿಗೆ ಜನತಾಂತ್ರಿಕವಾದುದಾಗಿದೆ? ಗ್ರಾಮವೊಂದರ ಸುಮಾರು ಅರ್ಧದಷ್ಟಿರುವ ಮಹಿಳೆಯರ ಜೊತೆ ಸಂವಾದಕ್ಕೆ ಗ್ರಾಮಪಂಚಾಯಿತಿ ಸದಸ್ಯರು ಸಿದ್ಧರಿಲ್ಲ.

ಮಹಿಳೆಯರನ್ನು ಗ್ರಾಮಪಂಚಾಯಿತಿ ಸದಸ್ಯರು ಹೇಗೆ ಪರಿಭಾವಿಸಿಕೊಂಡಿದ್ದಾರೆ ಎಂಬುದು ಇಲ್ಲಿನ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ. ಇಂತಹ ಒಂದು ವ್ಯವಸ್ಥೆಯಿಂದ ಯಾವ ಬಗೆಯ ಲಿಂಗ ಸಮಾನತೆ-ಮಹಿಳೆಯರ ಸಬಲೀಕರಣವನ್ನು ನಿರೀಕ್ಷಿಸುವುದು? ಇದು ಅತ್ಯಂತ ಸ್ಪಷ್ಟವಾಗಿ ಪ್ರಜಾಪ್ರಭುತ್ವ ಮೌಲ್ಯ ಸಮಾಜದಲ್ಲಿ ಆಳವಾಗಿ ಬೇರೂರಿಲ್ಲ ಎಂಬುದನ್ನು ಸೂಚಿಸುತ್ತದೆ.

ಅನುಸಂಧಾನತ್ವದ ಅಭಾವಕ್ಕೆ ಜಾತಿ ಸ್ವರೂಪವಿದೆ ಮತ್ತು ವರ್ಗಸ್ವರೂಪವಿದೆ. ಈ ಅಭಾವದ ಲಿಂಗ ಸ್ವರೂಪವನ್ನು ಮೇಲೆ ವಿವರಿಸಿದ್ದೇವೆ. ಅನುಸಂಧಾನತ್ವವನ್ನು-ಸಂವಾದವನ್ನು ಗ್ರಾಮೀಣ ಪ್ರದೇಶಗಳಲ್ಲಿ ಉನ್ನತ ಜಾತಿಗಳು ಗುತ್ತಿಗೆ ಹಿಡಿದುಕೊಂಡುಬಿಟ್ಟಿವೆ. ಗ್ರಾಮಪಂಚಾಯಿತಿ ಸದಸ್ಯರಿಗಾಗಿ ನಾವು ತರಬೇತಿ ಕಮ್ಮಟಗಳನ್ನು ನಡೆಸುತ್ತಿದ್ದೇವೆ. ಈ ಕಮ್ಮಟಗಳಲ್ಲಿ ಅನುಸಂಧಾನತ್ವವನ್ನು ಉನ್ನತ ಜಾತಿಗಳು ಮನಾಪಲಿ ಮಾಡಿಕೊಂಡಿರುವುದು ನಮ್ಮ ಗಮನಕ್ಕೆ ಬಂದಿದೆ. ಪ.ಜಾ ಮತ್ತು ಪ.ಪಂ.ಗಳಿಗೆ ಸೇರಿದ ಪಂಚಾಯಿತಿ ಸದಸ್ಯರಿಗೆ ಮಾತನಾಡಲು ಅವಕಾಶ ಕೊಟ್ಟರೆ ಅದಕ್ಕೆ ಪ್ರೋತ್ಸಾಹ ಕೊಟ್ಟರೆ, ಅವರು ಉತ್ಸಾಹದಿಂದಲೇ ಭಾಗವಹಿಸುತ್ತಾರೆ. ಅಂತಹ ಸಂದರ್ಭದಲ್ಲಿ ಉನ್ನತ ಜಾತಿ ಹಾಗೂ ವರ್ಗಕ್ಕೆ ಸೇರಿದ ಸದಸ್ಯರು 'ಅವರಿಗೇನು ಗೊತ್ತಾಗುತ್ತೆ ಬಿಡಿ, ಸಾರ್' ಎಂದು ಕಟಕಿಯಾಡುತ್ತಾ ಸಂವಾದವನ್ನು ಅವರಿಂದ

ಕಿತ್ತುಕೊಂಡು ತಾವೇ ಮಾತನಾಡತೊಡಗುತ್ತಾರೆ. ಉನ್ನತ ಜಾತಿ-ವರ್ಗದ ಜನ ಕೇವಲ ಅಭಿವೃದ್ಧಿಯ ಸವಲತ್ತು-ಸೌಲಭ್ಯಗಳನ್ನಷ್ಟೆ ಕಿತ್ತುಕೊಳ್ಳುವುದಿಲ್ಲ. ಅನುಸಂಧಾನತ್ವವನ್ನು-ಸಂವಾದವನ್ನು ಕೆಳಜಾತಿಗಳಿಂದ ಮತ್ತು ಮಹಿಳೆಯರಿಂದ ಕಿತ್ತುಕೊಳ್ಳುತ್ತಾರೆ. ಅನೇಕ ಆರ್ಥಿಕ-ರಾಜಕೀಯ ಕಾರಣಗಳಿಂದಾಗಿ ಪ.ಜಾ ಮತ್ತು ಪ.ಪಂ.ದ ಜನರು ಇಂದು ತಮ್ಮ ಹಕ್ಕುಗಳನ್ನು ಒತ್ತಾಯಿಸತೊಡಗಿದ್ದಾರೆ. ಸಂವಾದದಲ್ಲಿ ತೊಡಗುತ್ತಾರೆ. ಅನುಸಂಧಾನತ್ವದ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತಾರೆ. ಆದರೆ ಇದು ವ್ಯಾಪಕವಾಗಿ ಕಂಡುಬರುತ್ತಿಲ್ಲ. ಪ್ರಜಾಪ್ರಭುತ್ವದ ಚಾಚು-ಹರವು ಸೀಮಿತವಾಗಿದ್ದರೆ ಅದಕ್ಕೆ ನಮ್ಮ ಸಮಾಜದಲ್ಲಿ ಅನೂಚಾನವಾಗಿ ಹರಿದುಕೊಂಡು ಬರುತ್ತಿರುವ ಸಾಂಪ್ರದಾಯಿಕ ಅಸಮಾನತೆಗಳು ಕಾರಣ ವಾಗಿವೆ. ಲಾಗಾಯ್ತಿನಿಂದಲೂ ನಮ್ಮ ಸಮಾಜದಲ್ಲಿ ದುರ್ಬಲರಿಂದ, ದಲಿತರಿಂದ ಮತ್ತು ಮಹಿಳೆಯರಿಂದ ಸಂವಾದದ ಹಕ್ಕನ್ನು ಕಿತ್ತುಕೊಳ್ಳಲಾಗಿತ್ತು. ಅಸ್ಪೃಶ್ಯತೆಯಂತಹ ಅನಿಷ್ಟವು ಅನುಸಂಧಾನತ್ವಕ್ಕೆ-ಸಂವಾದಕ್ಕೆ ತೊಡಿಸಿದ ಬೇಡಿಯಾಗಿತ್ತು. 'ಮಾತನಾಡಬಾರದು', 'ಮುಟ್ಟಬಾರದು' ಎಂಬ ನಿಷೇಧಗಳು ಪ್ರಜಾಪ್ರಭುತ್ವದ ಸೀಮಿತತೆಯ ಮೂಲದಲ್ಲಿ ಕೆಲಸ ಮಾಡುತ್ತಿವೆ.

ಥಾಮಸ್ ಇಸಾಕ್ ಪ್ರಜಾಪ್ರಭುತ್ವವನ್ನು ಎರಡು ವಿಧಗಳಾಗಿ ವಿಂಗಡಿಸಿರುವುದನ್ನು ಹಿಂದೆ ನೋಡಿದ್ದೇವೆ. ಸಾಮಾಜಿಕ ಸಂಕುಚಿತತನದಿಂದಾಗಿ ಅನೂಚಾನವಾಗಿ ಹರಿದುಕೊಂಡು ಬಂದಿರುವ ಸಾಮಾಜಿಕ ಅಸಮಾನತೆಗಳಿಂದಾಗಿ, ಸಂವಾದವೆಂಬ ಸಂಪತ್ತನ್ನು ಉನ್ನತ ಜಾತಿಗಳು ತನ್ನ ವಶಮಾಡಿಕೊಂಡಿರುವುದರಿಂದ ನಮ್ಮ ಜನತಂತ್ರ-ಪ್ರಜಾಪ್ರಭುತ್ವವು ಕೇವಲ 'ನಾಮಮಾತ್ರ'ದ ಔಪಚಾರಿಕವಾದ-ತಾಂತ್ರಿಕವಾದ ಒಂದು ವ್ಯವಸ್ಥೆಯಾಗಿ ಕೆಲಸ ಮಾಡುತ್ತಿದೆ. ಈ ಕಾರಣದಿಂದಾಗಿಯೇ ಪ್ರಸ್ತುತ ಅಧ್ಯಯನದ ಮೂಲ ಪ್ರಮೇಯದಲ್ಲಿ ವಿಷದಪಡಿಸಿರುವಂತೆ ಅಭಿವೃದ್ಧಿ-ವಿಕೇಂದ್ರೀಕರಣ-ಸಬಲೀಕರಣ ಮುಂತಾದವು ಜಾತಿ ಚೌಕಟ್ಟಿಗೆ ಭಿನ್ನವಾದ ರೀತಿಯಲ್ಲಿ ಸಂಭವಿಸಲು ಸಾಧ್ಯವಾಗಿಲ್ಲ.

**ವಿಕೇಂದ್ರೀಕರಣ**

ಪ್ರಜಾಪ್ರಭುತ್ವವು ಹೆಚ್ಚು ಸಹಭಾಗಿತ್ವವಾದಿಯಾಗುವುದಕ್ಕೆ, ಅದರ ಹರವು ವಿಸ್ತೃತವಾಗು ವುದಕ್ಕೆ ವಿಕೇಂದ್ರೀಕರಣವನ್ನು ಪರಿಣಾಮಕಾರಿ ಸಾಧನವೆಂದು ಪರಿಗಣಿಸಲಾಗಿದೆ.(ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ್: ೨೦೦೨;೬೭, ಥಾಮಸ್ ಇಸಾಕ್, ೨೦೦೦:೬). ಪ್ರಜಾ ಪ್ರಭುತ್ವವು ಇಡೀ ಸಮಾಜವನ್ನು ಒಳಗೊಳ್ಳುವುದು ಅಧಿಕಾರವು ತಳಮಟ್ಟಕ್ಕೆ ವರ್ಗಾವಣೆ ಯಾದಾಗ ಮಾತ್ರ ಎನ್ನಲಾಗಿದೆ. ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ರವರು ಎಚ್ಚರಿಸಿರುವಂತೆ ವಿಕೇಂದ್ರೀಕರಣವೇ ಪ್ರಜಾಪ್ರಭುತ್ವವಲ್ಲ. ಅಧಿಕಾರದ-ಅಭಿವೃದ್ಧಿಯ ವಿಕೇಂದ್ರೀಕರಣವನ್ನೇ ಪ್ರಜಾಪ್ರಭುತ್ವದ ಸಬಲೀಕರಣವೆಂದು ತಿಳಿಯಲಾಗುತ್ತಿದೆ. ಈ ಬಗ್ಗೆ ವಿವರವಾಗಿ ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಏನು ಹೇಳಿದ್ದಾರೆ ಎಂಬುದನ್ನು ನೋಡುವುದು ಸೂಕ್ತ.(೨೦೦೨ : ೩೫೯)

" Local democracy is some times treated as synonymous with decentralisation, but the two are in fact quite distinct. In particular, decentralisation is not necessarily conducive to local demcracy. In fact in situations of sharp local inequalities, decentralisation some time heightens the concentration of power, and discourages rather than fosters participation among the underprivileged".

ಪ್ರಜಾಪ್ರಭುತ್ವದಲ್ಲಿ ಎಲ್ಲ ಜನರು ಭಾಗವಹಿಸುವುದಕ್ಕೆ ಮತ್ತು ವಿಕೇಂದ್ರೀಕರಣವು ಸಹಭಾಗಿತ್ವವಾದಿಯಾಗುವುದಕ್ಕೂ ಇರುವ ಬಹುಮುಖ್ಯ ತೊಡಕು ಎಂದರೆ ಅನೂಚಾನವಾಗಿ ಹರಿದುಕೊಂಡು ಬಂದಿರುವ ಪರಂಪರಾನುಗತ ಅಸಮಾನತೆಗಳಾಗಿವೆ. ಇಲ್ಲಿರುವ ದೊಡ್ಡ ಸಮಸ್ಯೆಯೆಂದರೆ ಮಾಹಿತಿಯ ಅಲಭ್ಯತೆ. ಅನುಸಂಧಾನ ಮತ್ತು ಸಂವಾದಗಳಂತೆ ಮಾಹಿತಿಯನ್ನು ಕೂಡ ಗ್ರಾಮೀಣ ಪ್ರದೇಶದಲ್ಲಿ ಉನ್ನತ ಜಾತಿ-ವರ್ಗಗಳು-ಜಮೀನುದಾರರು ತಮ್ಮ ವಶಮಾಡಿಕೊಂಡಿದ್ದಾರೆ.

**ಮಹಿಳೆಯ ಶೌಚಾಲಯ**

ಜನರ ಆಸೆ-ಆಕಾಂಕ್ಷೆಗಳು, ಅಭಿಲಾಷೆಗಳು ಹೇಗೆ ಗ್ರಾಮೀಣ ಮಟ್ಟದಲ್ಲಿ ಅಭಿವೃದ್ಧಿ ಯೋಜನೆಯ ಭಾಗವಾಗುವುದಿಲ್ಲವೆಂಬುದಕ್ಕೆ ಗ್ರಾಮೀಣ ಪ್ರದೇಶದಲ್ಲಿನ ಸಾಮುದಾಯಿಕ ಮಹಿಳಾ ಶೌಚಾಲಯದ ಸ್ಥಿತಿಗತಿಯಿಂದ ತಿಳಿದುಕೊಳ್ಳಬಹುದು. ಶೌಚ ಬಹುಮುಖ್ಯವಾದ ಒಂದು ದೈಹಿಕ ಅಗತ್ಯ. ಈ ವಿಷಯದಲ್ಲಿ ಸಮಾಜ, ಮುಖ್ಯವಾಗಿ ಮಹಿಳೆಯರ ಶೌಚಕ್ಕೆ ಸಂಬಂಧಿಸಿದಂತೆ ಎಂತಹ ನಿರ್ಲಿಪ್ತತೆ ತಳೆದಿದೆ ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ನಾವು ಕಳೆದ ೨ ವರ್ಷಗಳಲ್ಲಿ (೨೦೦೧-೦೨ ಮತ್ತು ೨೦೦೨-೦೩) ಎರಡು ಗ್ರಾಮ ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ವಸತಿ ಸಭೆಗಳನ್ನು(ಓಣಿಸಭೆ) ನಡೆಸಿದ್ದೇವೆ. ಸುಮಾರು ೨೫ ಅಂತಹ ಸಭೆಗಳನ್ನು ಐದು ಗ್ರಾಮಗಳಿಗೆ ಸಂಬಂಧಿಸಿದಂತೆ ನಡೆಸಿದ್ದೇವೆ. ಈ ಎಲ್ಲ ಸಭೆಗಳಲ್ಲಿ ಮತ್ತೆ ಮತ್ತೆ ವ್ಯಕ್ತವಾದ ಒಂದು ಒತ್ತಾಯವೆಂದರೆ ಮಹಿಳೆಯರ ಶೌಚಾಲಯ. ವಸತಿಸಭೆಯನ್ನು ಸಂಘಟಿಸಿದ್ದರಿಂದ, ಅಲ್ಲಿ ಸಂವಾದಕ್ಕೆ ಅನುಸಂಧಾನಕ್ಕೆ ಅವಕಾಶ ಮಾಡಿಕೊಟ್ಟದ್ದರಿಂದ ಇಂತಹ ಬೇಡಿಕೆ ಮುಂಚೂಣಿಗೆ ಬರಲು ಸಾಧ್ಯವಾಯಿತು. ನಾವು ವಸತಿಸಭೆ ನಡೆಸಿದ ಕೃಷ್ಣನಗರ ಗ್ರಾಮಪಂಚಾಯಿತಿಯ ಎರಡು ಗ್ರಾಮಗಳಾದ ಕೃಷ್ಣನಗರ ಮತ್ತು ದೌಲತ್‌ಪುರಗಳಲ್ಲಿ ಮಹಿಳಾ ಶೌಚಾಲಯಗಳನ್ನು ಕಟ್ಟಲಾಗಿತ್ತು. ಆದರೆ ಅವು ಸದ್ಯ ಉಪಯೋಗಿಸುವ ಸ್ಥಿತಿಯಲ್ಲಿಲ್ಲ. ಗ್ರಾಮೀಣ ಪ್ರದೇಶದ ಶೇ.೫೦ ರಷ್ಟು ಜನಸಂಖ್ಯೆಯ ಕನಿಷ್ಠ ಅಗತ್ಯವಾದ ಶೌಚಾಲಯ ಸೌಲಭ್ಯವನ್ನು ಒದಗಿಸಲು ಗ್ರಾಮಪಂಚಾಯಿತಿಗಳಿಗೆ, ರಾಜ್ಯ ಸರ್ಕಾರಕ್ಕೆ-ಕೇಂದ್ರ ಸರ್ಕಾರಕ್ಕೆ ಸಾಧ್ಯವಾಗಿಲ್ಲ. ಉನ್ನತ ಜಾತಿ ವರ್ಗಗಳಿಗೆ ಸೇರಿದ ಮಹಿಳೆಯರಿಗೆ ತಮ್ಮ ತಮ್ಮ ಹೊಲ ಗದ್ದೆಗಳಲ್ಲಿ ಶೌಚದ ಅಗತ್ಯಗಳನ್ನು ಪೂರೈಸಿಕೊಳ್ಳುವುದು ಸಾಧ್ಯ. ಬಡವರ, ದುರ್ಬಲರ ದಲಿತರ ಕುಟುಂಬಗಳಿಗೆ

ಸೇರಿದ ಮಹಿಳೆಯರಿಗೆ ಶೌಚದಂತಹ ಒಂದು ಸಾಮಾನ್ಯ ದೈಹಿಕ ಅಗತ್ಯವನ್ನು ಪೂರೈಸಿಕೊಳ್ಳಲು ಅಗತ್ಯವಾದ ಸೌಲಭ್ಯವಿಲ್ಲದಿರುವುದು ಒಂದು ದೊಡ್ಡ ದುರಂತ. ಇದು ನಮ್ಮ ಸಮಾಜದ ಸಂದರ್ಭದಲ್ಲಿ ಆದ್ಯತೆಯ ಸಂಗತಿಯಾಗಿಲ್ಲ. ಪ್ರಜಾಪ್ರಭುತ್ವ- ವಿಕೇಂದ್ರೀಕರಣದ ವೈಫಲ್ಯ ಕುರಿತಂತೆ ಶೌಚಾಲಯಕ್ಕೆ ಸಂಬಂಧಿಸಿದ ಒಂದೇ ಒಂದು ಮಾನದಂಡ ಸಾಕಾಗಿದೆ. ವರ್ಷಾನುಗಟ್ಟಲೆ ಉಪಯೋಗಿಸಬಲ್ಲಂತಹ ಶೌಚಾಲಯ ನಿರ್ಮಾಣದ ತಂತ್ರಜ್ಞಾನವನ್ನು ರೂಪಿಸುವುದು ನಮ್ಮ ವಿಜ್ಞಾನಿಗಳಿಗೆ, ವಾಸ್ತುಶಾಸ್ತ್ರಜ್ಞರಿಗೆ ಇಂದಿಗೂ ಸಾಧ್ಯವಾಗಿಲ್ಲ. ನೀರಿನ ಕೊರತೆಯಿರುವುದರಿಂದ, ಶೌಚಾಲಯದಲ್ಲಿ ನೀರಿನ ಸರಬರಾಜು ವ್ಯವಸ್ಥೆಯಿಲ್ಲದಿರುವುದರಿಂದ ಮಹಿಳೆಯರ ಶೌಚಾಲಯಗಳು ಗ್ರಾಮಗಳನ್ನು ನಿರ್ಮಿಸಿದ ಒಂದೆರಡು ತಿಂಗಳಲ್ಲಿ ಉಪಯೋಗಿಸಲಾಗದಂತಹ ಸ್ಥಿತಿ ತಲುಪಿಬಿಡುತ್ತವೆ.

**ಟಿಪ್ಪಣಿಗಳು**

೧. ಈ ಬಗೆಯ ಅಧ್ಯಯನಕ್ಕೆ ನಿದರ್ಶನವಾಗಿ 'ಜನತಾಂತ್ರಿಕ ವಿಕೇಂದ್ರೀಕರಣ : ಕರ್ನಾಟಕದ ಅನುಭವ' ಎಂಬ(೨೦೦೦) ಅಬ್ದುಲ್ ಅಜೀಜ್ ರವರ ಪ್ರಬಂಧವನ್ನು ನೋಡಬಹುದು. ಅದೊಂದು ಚಾರಿತ್ರಿಕ ಅಧ್ಯಯನವೂ ಆಗಿದೆ. ಈ ಪ್ರಬಂಧದಲ್ಲಿ ಅಜೀಜ್ ಅವರು ವಿಕೇಂದ್ರೀಕರಣ-ಪಂಚಾಯತ್ ರಾಜ್ ಸಂಸ್ಥೆಗಳನ್ನು ಕುರಿತಂತೆ ಕೆಲವು ಮಾನದಂಡಗಳನ್ನು ರೂಪಿಸಿಕೊಂಡು ಅನುಷ್ಠಾನದಲ್ಲಿ ಅವುಗಳನ್ನು ಸಾಧಿಸಿಕೊಳ್ಳಲಾಗಿದೆಯೋ ಹೇಗೆ ಎಂಬುದನ್ನು ಪರೀಕ್ಷೆ ಮಾಡಿ ತಮ್ಮ ತೀರ್ಮಾನ ಕೊಟ್ಟಿದ್ದಾರೆ. ಈ ಬಗೆಯ ಅಧ್ಯಯನಗಳು ಮೂಲಭೂತವಾಗಿ 'ವಸ್ತುನಿಷ್ಠ', 'ಮೌಲ್ಯ ನಿರಪೇಕ್ಷ', 'ಕಾರಣ ಮೀಮಾಂಸಾ' ಅಧ್ಯಯನಗಳಾಗಿವೆ. ಈ ಬಗೆಯ ಅಧ್ಯಯನ ವಿಧಾನವನ್ನು ತಿರಸ್ಕರಿಸಿ ಇಲ್ಲಿ ವ್ಯಕ್ತಿನಿಷ್ಟ, ಅನುಭವನಿಷ್ಟ, ಮೌಲ್ಯಸಾಂದ್ರ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

೨. ಭೌಗೋಳಿಕವಾಗಿ ಗ್ರಾಮವನ್ನು ಒಂದು ಘಟಕವಾಗಿ ಪರಿಗಣಿಸುವುದರ ಬಗ್ಗೆ ಅನುಮಾನ ಸಾಧ್ಯ. ಅನೇಕ ಕೇರಿಗಳು -ಓಣಿಗಳು ಅಲ್ಲಿರುತ್ತವೆ. ಧಾರ್ಮಿಕ ಸ್ಥಳಗಳಿರುತ್ತವೆ. ಕೆಲವು ಸ್ಥಳಗಳು -ವಸತಿಗಳು ಕೆಲವರಿಗೆ ನಿಷಿದ್ಧವಾಗಿರುತ್ತವೆ. ನಮ್ಮ ಗ್ರಾಮಗಳು ಮೂಲಭೂತವಾಗಿ inclusive ಸ್ವರೂಪದವುಗಳಲ್ಲ. ಗ್ರಾಮವನ್ನು ಒಂದು ಪ್ರಾತಿನಿಧಿಕ ಘಟಕವಾಗಿ ಕಾಣುವುದು ಕೇವಲ ಭಾವನಾತ್ಮಕವಾದ ಒಂದು ಸಂಗತಿಯಾಗಿದೆ. ಈ ಬಗ್ಗೆ ಆಂದ್ರೆ ಬೆಥಿಲ್ಲೆ ಹೇಳುವ ಈ ಮಾತುಗಳನ್ನು ನೋಡಬಹುದು.

> "The village which appears as a unit from outside, reveals fairly clear physical divisions when examined from with in. It divides itself into three more or less well defined physical segments......."(1985:25)

೩. ಅಸ್ಪೃಶ್ಯತೆಯನ್ನು ಕುರಿತ ಡಾ.ಬಿ.ಆರ್.ಅಂಬೇಡ್ಕರ್‌ರವರ ಬರಹಗಳು ಮತ್ತು ವಿಶ್ಲೇಷಣೆ ಸೂಕ್ಷ್ಮ ಒಳನೋಟಗಳಿಂದ ಕೂಡಿವೆ. ಅವರ ಮರಣದ ನಂತರ ೧೯೮೯ರಲ್ಲಿ ಮೊದಲಬಾರಿಗೆ ಪ್ರಕಟವಾದ ಅವರ ೧೯೪೮ರ ಪ್ರಬಂಧ 'ಔಟ್ ಸೈಡ್ ದಿ ಫೋಲ್ಡ್'ನಲ್ಲಿ ಅವರು ಸರ್ ಚಾರ್ಲ್ಸ್‌ಮೆಟ್‌ಕಾಫ್ ಮತ್ತು ಗಾಂಧಿಯವರ ಭಾರತೀಯ ಗ್ರಾಮಗಳ ರಮ್ಯ ಚಿತ್ರಣಕ್ಕೆ ಪ್ರತಿಯಾಗಿ ಅವುಗಳ ನಗ್ನರೂಪವನ್ನು ಬಿಚ್ಚಿಟ್ಟಿದ್ದಾರೆ. (ನೋಡಿ : 'ಔಟ್ ಸೈಡ್ ದಿ ಫೋಲ್ಡ್ ' ೨೦೦೨, ಇಲ್ಲಿ ವಲೇರಿಯನ್ ರೋಡ್ರಿಗಸ್ (ಸಂ) **ಡಾ.ಬಿ.ಆರ್.ಅಂಬೇಡ್ಕರ್ ರವರ ಸಾರಸತ್ವ ಬರಹಗಳು.** ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಪ್ರೆಸ್ , ಪುಟಗಳು : ೩೨೧-೩೩೧. ಈ ಸಂಕಲನದಲ್ಲಿ ಸದರಿ ಪ್ರಬಂಧ ಕುರಿತಂತೆ ಸಂಪಾದಕರು ಬರೆದಿರುವ ಟಿಪ್ಪಣಿ ಅಗತ್ಯ ಗಮನಿಸಬೇಕು ೩೨೧)

೪. 'ಊರೊಳಗೆ' ಮತ್ತು 'ಊರಹೊರಗೆ' ಎಂಬ ಮೌಲ್ಯಸಾಂದ್ರ ನುಡಿಗಳ ಸ್ವರೂಪ-ಭಿತ್ತಿ ಅವುಗಳನ್ನು ಮೌಲ್ಯ ನಿರಪೇಕ್ಷ ನೆಲೆಯಲ್ಲಿ ಪರಿಭಾವಿಸಿಕೊಂಡರೆ ಗೋಚರಿಸುವುದಿಲ್ಲ. ಡಾ.ಬಿ.ಆರ್.ಅಂಬೇಡ್ಕರ್ ತಮ್ಮ ೧೯೪೮ರ 'ಔಟ್ ಸೈಡ್ ದಿ ಫೋಲ್ಡ್' ಪ್ರಬಂಧದಲ್ಲಿ ಬಳಸಿರುವ 'ಊರೊಳಗೆ' ಮತ್ತು 'ಊರಿನ ಹೊರಗೆ' ಎಂಬ ನುಡಿಗಳಿಗೆ ದೊಡ್ಡ ಇತಿಹಾಸವಿದೆ. ಅವು ಕೇವಲ ಭೌಗೋಳಿಕವಾದ - ಆಡಳಿತಾತ್ಮಕ ವಾದ ನುಡಿಗಳಲ್ಲ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೇಳಬೇಕೆಂದರೆ ಈ ನುಡಿಗಳಿಗೆ ೮೦೦ ವರ್ಷಗಳ ಇತಿಹಾಸವಿದೆ.

ಕರ್ನಾಟಕದ ವಚನ ಸಂಸ್ಕೃತಿಗೆ ಸೇರಿದ(೧೨ನೆಯ ಶತಮಾನ) ಬೊಂತಾದೇವಿ ಎಂಬ ವಚನಗಾರ್ತಿ ತನ್ನ ಒಂದು ವಚನದಲ್ಲಿ ಅಂಬೇಡ್ಕರ್‌ರವರು ೧೯೪೮ರಲ್ಲಿ ತಮ್ಮ ಪ್ರಬಂಧದಲ್ಲಿ ಈ ನುಡಿಗಳನ್ನು ಬಳಸಿರುವ ಬಗೆಗೆ ಆಕರವೆನ್ನುವಂತೆ ಅವಳು ಅವುಗಳನ್ನು ತನ್ನ ಒಂದು ವಚನದಲ್ಲಿ ಬಳಸಿದ್ದಾಳೆ. ಅವಳ ವಚನ ಹೀಗಿದೆ.

ಊರ ಒಳಗಣ ಬಯಲು ಊರ ಹೊರಗಣ ಬಯಲೆಂದುಂಟೆ?
ಊರೊಳಗೆ ಬ್ರಾಹ್ಮಣ ಬಯಲು ಊರ ಹೊರಗೆ ಹೊಲೆ ಬಯಲೆಂದುಂಟೆ?
ಎಲ್ಲಿ ನೋಡಿದಡೆ ಬಯಲೊಂದೆ
ಭಿತ್ತಿಯಿಂದ ಒಳ ಹೊರಗೆಂಬ ನಾಮವೈಸೆ
ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ
(ಸಮಗ್ರ ವಚನ ಸಂಪುಟ - ೫)

ಈ ವಚನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಊರೊಳಗೆ ಮತ್ತು ಊರ ಹೊರಗೆ ಎಂಬ ನುಡಿಗಳು ಯಾಕೆ ಮೌಲ್ಯಸಾಂದ್ರವಾಗಿವೆ ಎಂಬುದು ಅರ್ಥವಾಗುತ್ತದೆ. ಈ ಅಧ್ಯಯನದ ೧.೩ನೆಯ ಭಾಗದಲ್ಲಿ ಅಧ್ಯಯನ ವಿಧಾನದ ಬಗ್ಗೆ ಚರ್ಚಿಸುವಾಗ ಮೌಲ್ಯ

ನಿರಪೇಕ್ಷತೆ-ವಸ್ತುನಿಷ್ಠತೆ ಯಾಕೆ ಅಗತ್ಯವಿಲ್ಲ - ಅದು ಸಾಧ್ಯವಿಲ್ಲವೆಂಬ ವಿವರಣೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

೫. ಬಳ್ಳಾರಿ ಜಿಲ್ಲಾ ಸಂಡೂರು ತಾಲ್ಲೂಕಿನ ಕೃಷ್ಣನಗರ ಗ್ರಾಮಪಂಚಾಯಗೆ ಐದು ವರ್ಷಗಳ(೨೦೦೨-೨೦೦೭) ಅಭಿವೃದ್ಧಿ ಯೋಜನೆಯನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗವು ಸಿದ್ಧಮಾಡಿಕೊಟ್ಟಿದೆ. ಈ ಅಧ್ಯಯನ ಯೋಜನೆಯನ್ನು ಜಿಲ್ಲಾ ಯೋಜನಾ ಸಮಿತಿ(ಬಳ್ಳಾರಿ) ಇವರು ಪ್ರಾಯೋಜಿಸಿದ್ದರು (೨೦೦೧-೨೦೦೨). ಈ ಅಧ್ಯಯನದ ಸಲುವಾಗಿ ನಾವು ಕೃಷ್ಣನಗರ ಮತ್ತು ದೌಲತ್‌ಪುರಗಳಲ್ಲಿ ವಿವರವಾದ ಕ್ಷೇತ್ರಕಾರ್ಯ ನಡೆಸಿದ್ದೇವೆ.

೬. ಕೊಪ್ಪಳ ಜಿಲ್ಲಾ ಯಲಬುರ್ಗಾ ತಾಲ್ಲೂಕಿನ ಯರೆಹಂಚಿನಾಳ ಗ್ರಾಮಪಂಚಾಯಿತಿಗೆ ಆರು ವರ್ಷಗಳ (೨೦೦೪-೨೦೧೦) ಅಭಿವೃದ್ಧಿ ಯೋಜನೆ ಸಿದ್ಧಪಡಿಸುವ ಕಾರ್ಯದ ಸಲುವಾಗಿ ಅಭಿವೃದ್ಧಿ ಅಧ್ಯಯನ ವಿಭಾಗ (ಕನ್ನಡ ವಿಶ್ವವಿದ್ಯಾಲಯ, ಹಂಪಿ)ವು ೨೦೦೨ರಲ್ಲಿ ಯರೆಹಂಚನಾಳ, ಬಿನ್ನಾಳ ಮತ್ತು ಸಿದ್ನಕೊಪ್ಪ ಗ್ರಾಮಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ನಡೆಸಿತು. ಈ ಯೋಜನೆಯನ್ನು ಜಿಲ್ಲಾ ಯೋಜನಾ ಸಮಿತಿ(ಕೊಪ್ಪಳ) ಇವರು ಪ್ರಾಯೋಜಿಸಿದ್ದರು.

೭. ಈ ಬಗ್ಗೆ ಜನ್ ಬ್ರೆಮನ್ ರವರ ಹೇಳಿಕೆಯು ಹೆಚ್ಚು ಬೆಳಕು ಚೆಲ್ಲುತ್ತದೆ.

> "During the last few decades, the devolution of power from centre to lower political and administrative echelons has not only consolidated but also legitimised the hegemony of the dominant castes in the countryside with the result that the dominated lower classes have little if any, opportunity to articulate their claims to a better life"(1997:59)

ಈ ಬಗ್ಗೆ ಮಾತನಾಡುತ್ತಾ ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಅವರು ತಮ್ಮ ಇತ್ತೀಚಿಗಿನ ಗ್ರಂಥ India : Development and Participation(೨೦೦೦)ನಲ್ಲಿ hardenhed antecedent social inequality ಬಗ್ಗೆ ಮಾತನಾಡುತ್ತಾರೆ. (ನೋಡಿ : ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ೨೦೦೦:xxv)

ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ಅವರು ಕರೆದಿರುವ 'hardened antecedent social in equalities' ಎಂಬ ಸಂಗತಿಯನ್ನು ಜೀನ್‌ಡ್ರೀಜ್‌ರವರು ತಮ್ಮ ಪಲಾನಪುರ ಕುರಿತ ಅಧ್ಯಯನದಲ್ಲಿ 'baseline inequalities' ಎಂದು ಕರೆದಿದ್ದಾರೆ. ಅವರ ಪ್ರಕಾರ ಆರ್ಥಿಕವಾಗಿ ಉಂಟಾಗುತ್ತಿರುವ ಬದಲಾವಣೆಗಳಿಗಿಂತ 'baseline inequality' ಯಾಕೆ ಜಿಗುಟಾಗಿ ಊರ್ಜಿತಗೊಳ್ಳುತ್ತಿದೆ ಎಂಬುದೇ ಮುಖ್ಯ.(೧೯೯೭:೧೭೦)

೮. ಕಳೆದ ನಾಲ್ಕುದ ದಶಕಗಳಿಂದಲೂ(೧೯೬೦) ಭಾರತದ ಗ್ರಾಮಗಳ ಅಧ್ಯಯನದಲ್ಲಿ

ತೊಡಗಿರುವ ಜನ್ ಬ್ರೆಮನ್‌ರವರ ಕೆಳಗಿನ ಮಾತುಗಳು ನಮ್ಮ ಗ್ರಾಮೀಣ ಪ್ರದೇಶದ ಪಿರಮಿಡ್ದು ರಚನೆ ಮೇಲೆ ಬೆಳಕು ಚೆಲ್ಲುತ್ತವೆ.

"......prosperity at the comparatively small top of the rural order has increased for more rapidly than the rate at which poverty at its much broader bottom has decreased(1997:57)

೯. ಡಿ.ಎಂ.ನಂಜುಂಡಪ್ಪನವರು 'ಪ್ರದೇಶ ಯೋಜನೆ' 'ಏರಿಯಾ ಪ್ಲಾನಿಂಗ್ 'ಗೆ ಹೆಚ್ಚಿನ ಮಹತ್ವ ನೀಡುತ್ತಾರೆ. ವಲಯವಾರು ಚಟುವಟಿಕೆಗಳನ್ನು ಏಕತ್ರ ಸಂಯೋಜಿಸಿ 'ಪ್ರದೇಶ'ವನ್ನು ಮೂಲಘಟಕವನ್ನಾಗಿ ಮಾಡಿಕೊಂಡು ಅಭಿವೃದ್ಧಿಯನ್ನು ಸಂಘಟಿಸಿದಾಗ ಮಾತ್ರ ಅದು 'ಸುಸ್ಥಿರಗತಿ'ಯನ್ನು ಸಾಧಿಸಿಕೊಳ್ಳಲು ಸಾಧ್ಯ. ಮುಂದುವರಿದು ಅವರು ಹೀಗೆ ಬರೆಯುತ್ತಾರೆ.

"Who has benefited? which area is benifited? are the questions which are relevant in the process of assessing the benefitial effects of planning........Decentralised planning with an appropriate unit or area of planning like the district, taluk, village offers the instrument to translate the ultimate objective of planning......" (ಡಿ.ಎಂ.ನಂಜುಂಡಪ್ಪ ೧೯೯೯:೪). ಈ ಬಗ್ಗೆ ಅಬ್ದುಲ್ ಅಜೀಜ್ ರವರ (೨೦೦೦:೩೫-೩೬) ಲೇಖನವನ್ನು ನೋಡಬಹುದು. ಅವರೂ ಸಹ ಡಿ.ಎಂ. ನಂಜುಡಪ್ಪನವರಂತೆ ವಲಯವಾರು ಯೋಜನೆಗೆ ಪ್ರತಿಯಾಗಿ 'ಪ್ರದೇಶ'ವನ್ನು 'ಏರಿಯಾ'ವನ್ನು ಯೋಜನೆಯ ಘಟಕವನ್ನಾಗಿ ಮಾಡಿಕೊಳ್ಳುವುದರ ಪರವಾಗಿ ವಾದಿಸುತ್ತಾರೆ.

೧೦. ಜೀನ್ ಡ್ರೀಜ್ ರವರು ಒಂದು ದೀರ್ಘ ಕಾಲಾವಧಿಯಲ್ಲಿ ಪಲಾನಪುರ ಗ್ರಾಮದಲ್ಲಿನ ಭೂಮಾಲಿಕತ್ವ, ಕಸಬುಗಳು ಮತ್ತು ಸಾಮಾಜಿಕ ಅಸಮಾನತೆಗಳ ಸ್ವರೂಪವನ್ನು ಚರ್ಚಿಸುತ್ತಾ, ಒಂದು ಕಾಲಕ್ಕೆ ಅಭಿವೃದ್ಧಿಯು ಪ್ರಬಲ ಜಾತಿಯಾದ ಠಾಕೂರರ ಮನಾಪಲಿಯಾಗಿದ್ದುದು ಈಗ ಮಧ್ಯಮ ಹಂತದ ಜಾತಿಯಾದ 'ಮುರಾವಸ್'(Muraos) ಎಂಬುದರ ವಶವಾಗಿರುವ ಪರಿಯನ್ನು ಗುರುತಿಸಿದ್ದಾರೆ. ಪಲಾನಪುರ ಗ್ರಾಮಕ್ಕೆ ಸಂಬಂಧಿಸಿದಂತೆ ಠಾಕೂರರು ಉನ್ನತ ಜಾತಿಯವರಾಗಿದ್ದರೆ ಮುರಾವಸ್ ಮಧ್ಯಮ ಹಂತದ ಜಾತಿಯಾಗಿದೆ. ಜಾತಬ್ ಎಂಬುದು ಕೆಳಸ್ತರದ ಜಾತಿಯಾಗಿದೆ. ಈ ಎಲ್ಲ ಬದಲಾವಣೆಗಳ ನಡುವೆ ಸಮಾಜದ ಏಣಿಶ್ರೇಣಿ ಗಳಲ್ಲಿ ಕೆಳಸ್ತರದಲ್ಲಿರುವ ಜಾತ್‌ಬ್ ಜಾತಿಯ ಜನರಿಗೆ(ಪರಿಶಿಷ್ಟ ಜಾತಿ) ಅಭಿವೃದ್ಧಿಯು ಎಟುಕದಿರುವ ಸ್ಥಿತಿಯನ್ನು ಅವರು ತಮ್ಮ ಅಧ್ಯಯನದಲ್ಲಿ ತೋರಿಸಿಕೊಟ್ಟಿದ್ದಾರೆ. ಅಭಿವೃದ್ಧಿಯ ಹರವು-ವ್ಯಾಪ್ತಿ ಇನ್ನೂ ಸೀಮಿತವಾಗಿರುವ, ಸಂಕುಚಿತವಾಗಿರುವ ರೀತಿಯನ್ನು ಅವರು ಗುರುತಿಸಿದ್ದಾರೆ.

ಇದೇ ಬಗೆಯ ಬದಲಾವಣೆಗಳನ್ನು ನಾವು ಅಧ್ಯಯನ ಮಾಡಿದ ಗ್ರಾಮಗಳಲ್ಲೂ ಗುರುತಿಸಿದ್ದೇವೆ. ನಮ್ಮ ಗ್ರಾಮಗಳಲ್ಲಿ ಅಭಿವೃದ್ಧಿಯ ಫಲಗಳು ಪ್ರಬಲ ಜಾತಿಯಾದ ಲಿಂಗಾಯತರನ್ನು ದಾಟಿ ಮಧ್ಯಮ ಹಂತದ ಜಾತಿಗಳಾದ ಕುರುಬರು, ನೇಕಾರರು, ಬಾರಕೇರರು, ಬಡಿಗೇರರು, ಗೊಲ್ಲರು ಮುಂತಾದ ಜಾತಿಗಳಿಗೆ ತಲುಪಲು ತೊಡಗಿವೆ. ಆದರೆ ಪರಿಶಿಷ್ಟಜಾತಿ-ಪರಿಶಿಷ್ಟ ಪಂಗಡಗಳನ್ನು ದಟ್ಟವಾಗಿ ತಲುಪಲು ಇಂದಿಗೂ ಅವುಗಳಿಗೆ ಸಾಧ್ಯವಾಗಿಲ್ಲ. (ನೋಡಿ:ಜೀನ್ ಡ್ರೀಜ್ ೧೯೯೭:೧೨೬-೧೭೪)

೧೧. ಹರ್ಬಟ್ ಸ್ಪೆನ್ಸರ್ ರೂಪಿಸಿದ ಒಂದು ಪರಿಭಾವನೆ ಇದಾಗಿದೆ. ಇದು ವಿಕಾಸವಾದಿ ವಿಚಾರ ಪ್ರಣಾಳಿಕೆಯಾಗಿದೆ. ಅಭಿವೃದ್ಧಿಯೆನ್ನುವುದು, ಸಂಸ್ಕೃತಿಯಂತೆ, ನಾಗರಿಕತೆಯಂತೆ ಒಂದೇ ರಾತ್ರಿಯಲ್ಲಿ ಸಂಭವಿಸುವ ಸಂಗತಿಯಲ್ಲ. ಅವು ದೀರ್ಘಾವಧಿಯಲ್ಲಿ ಸಾವಧಾನವಾಗಿ ಸಂಭವಿಸುವ ಕ್ರಿಯೆಗಳಾಗಿವೆ. ಇದು ದೀರ್ಘ ಅವಧಿಯನ್ನು ಒಳಗೊಂಡಿದೆ. ಇದರ ಪರಿಭಾವನೆಯನ್ನು ಹೀಗೆ ಹಿಡಿದಿಡಬಹುದು. ಅಭಿವೃದ್ಧಿಯು ಮೊದಲು ಉನ್ನತ ಜಾತಿಗಳಾದ ಬ್ರಾಹ್ಮಣರು, ಜೈನರು, ಕ್ಷತ್ರಿಯರು, ವೈಶ್ಯರು ಮುಂತಾದ ಜಾತಿಗಳಿಗೆ ಫಲಗಳನ್ನು ಒದಗಿಸಿದೆ. ಇದರ ಎರಡನೆಯ ಮಜಲಿನಲ್ಲಿ ಮಧ್ಯಮ ಹಂತದ ಜಾತಿಗಳಾದ ಶೂದ್ರ ಅಥವಾ ಹಿಂದುಳಿದ ಜಾತಿಗಳಿಗೆ ಅಭಿವೃದ್ಧಿಯು ಫಲಗಳನ್ನು ಒದಗಿಸ ತೊಡಗುತ್ತದೆ. ಇನ್ನು ಮುಂದೆ ಅದು ಸಾಮಾಜಿಕ ಶ್ರೇಣಿಯಲ್ಲಿನ ತಳಸ್ತರದ ಪ.ಜಾ. ಮತ್ತು ಪ.ಪಂಗಡಗಳ ಜನರಿಗೂ ಅದು ತಲುಪುತ್ತದೆ. ಇದು ಸಾಮಾಜಿಕ ಡಾರ್ವಿನಿಸಮ್‌ನ ಸ್ಥೂಲ ವಿವರಣೆ.

ಈ ಬಗೆಯ ವಿಚಾರ ಪ್ರಣಾಳಿಕೆಯು ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಪುನರುತ್ಪಾದಿಸುವ ರೀತಿಯದ್ದಾಗಿದೆ. ಅಸ್ತಿತ್ವದಲ್ಲಿರುವ ಸಾಮಾಜಿಕ ರಚನೆಯನ್ನು ಊರ್ಜಿತಗೊಳಿಸುವ ವಿಚಾರ ಪ್ರಣಾಳಿಕೆ ಇದಾಗಿದೆ. ಇಂತಹ ವಿಚಾರ ಪ್ರಣಾಳಿಕೆಯನ್ನು ಆಧರಿಸಿಕೊಂಡಿರುವುದರಿಂದಲೇ 'ಅಭಿವೃದ್ಧಿ-ಪ್ರಜಾಪ್ರಭುತ್ವ-ವಿಕೇಂದ್ರೀಕರಣ ನಮ್ಮ ಸಮಾಜದ ಸಂದರ್ಭದಲ್ಲಿ ಅಸ್ತಿತ್ವದಲ್ಲಿರುವ ಜಾತಿ-ಅಧಿಕಾರ ಸಂಬಂಧಗಳ ಚೌಕಟ್ಟನ್ನು ಮೀರಿ ಸಂಭವಿಸಲು ಸಾಧ್ಯವಿಲ್ಲ' ಎಂಬ ಪ್ರಮೇಯವನ್ನು ನಮ್ಮ ಅಧ್ಯಯನಕ್ಕೆ ರೂಪಿಸಿಕೊಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಪ್ರಧಾನವಾಗಿ ಏನನ್ನು ವಾದಿಸಲು ಪ್ರಯತ್ನಿಸಲಾಗಿದೆಯೆಂದರೆ ಅಭಿವೃದ್ಧಿ-ಪ್ರಜಾಪ್ರಭುತ್ವ-ವಿಕೇಂದ್ರೀಕರಣ ಸಬಲೀಕರಣ ಮುಂತಾದವುಗಳು ಮೇಲಿನಿಂದ ಕೆಳಗೆ ಹರಿದುಬರುವ ರೀತಿಗೆ ಭಿನ್ನವಾಗಿ ಎಲ್ಲ ರೀತಿಯ ವಂಚನೆ, ಶೋಷಣೆ, ತುಳಿತಕ್ಕೆ ಒಳಗಾಗಿರುವ ದುರ್ಬಲರು, ದಲಿತರು, ಮಹಿಳೆಯರು ಇವರನ್ನು ಮೊದಲೇ ಒಳಗೊಳ್ಳುವ ರೀತಿಯ ವಿಚಾರ ಪ್ರಣಾಳಿಕೆಯ ಅಗತ್ಯವನ್ನು ಒತ್ತಿ ಹೇಳಲು ಪ್ರಯತ್ನಿಸಲಾಗಿದೆ. ಈ ಬಗೆಯ ವಿಚಾರ ಪ್ರಣಾಳಿಕೆಯ ಅಭಾವ

ದಿಂದಾಗಿಯೇ ಗ್ರಾಮೀಣ ಅಭಿವೃದ್ಧಿ-ವಿಕೇಂದ್ರೀಕರಣ-ಪ್ರಜಾಪ್ರಭುತ್ವ-ಲಿಂಗಸಮಾನತೆ ಮುಂತಾದವು ನಿರೀಕ್ಷಿಸಿದ ಫಲಗಳನ್ನು ನೀಡುವು ದರಲ್ಲಿ ವಿಫಲವಾಗಿವೆ ಎಂಬುದನ್ನು ಇಲ್ಲಿ ಪ್ರತಿಪಾದಿಸಲು ಪ್ರಯತ್ನಿಸಲಾಗಿದೆ. ಸಾಮಾಜಿಕ ಡಾರ್ವಿನಿಸಮ್‌ಗೆ ಪ್ರತಿಯಾದ ಒಂದು ವಿಚಾರ ಪ್ರಣಾಳಿಕೆಯ ಅಗತ್ಯವನ್ನು ಒತ್ತಿ ಹೇಳಲಾಗಿದೆ.

೧೨. 'ಗ್ರಾಮೀಣ ಸಮುದಾಯ'ವೆಂಬುದು ಒಂದು ರಮ್ಯ-ಭಾವನಾತ್ಮಕ ಪರಿಭಾವನೆ. ಈ ಬಗ್ಗೆ ಜನ್ ಬ್ರೆಮನ್ ಹೀಗೆ ಬರೆಯುತ್ತಾರೆ.

"The apeal to a long-existed village community ethos was really little romantic rhetoric"(೧೯೯೭:೩೬)

ಈ ಬಗ್ಗೆ ಚರ್ಚೆ ಮಾಡುತ್ತ ಜನ ಬ್ರೆಮನ್ ರವರು ಆಂದ್ರೆ ಬೆಥೆಲ್ಲೆಯವರನ್ನು ಉಲ್ಲೇಖಿಸುತ್ತಾರೆ. (೧೯೯೭:೩೭) ಈ ಬಗೆಗಿನ ಚರ್ಚೆಗೆ ನೋಡಿ : ಟಿ.ಆರ್. ಚಂದ್ರಶೇಖರ, ೨೦೦೩, 'ಸೋಶಿಯಲ್ ಕ್ಯಾಪಿಟಲ್ v/s ಕಾಸ್ಟ್ ಕ್ಯಾಪಿಟಲ್', ಪುಟಗಳು ೮-೧೨, ಅಭಿವೃದ್ಧಿ ಅಧ್ಯಯನ, ಸಂ.೨. ಸಂ.೨, ಜನವರಿ ೨೦೦೩

೧೩. 'ಆರೋಹಣವಾದಿ ಅಸಮಾನತೆ'ಯನ್ನು (progresive inequality)ಯನ್ನು ಜನ್ ಬ್ರೆಮನ್ ರವರು ಹೀಗೆ ನಿರ್ವಚಿಸಿದ್ದಾರೆ.

> "..... prosperity at the comparatively small top of the rural order has increased far rapidly than the rate at which poverty at its broader bottom has decreased" (1997:57)

೧೪. ಈ ವಿಷಯವನ್ನು ಕುರಿತ ವಿವರವಾದ ಚರ್ಚೆಗೆ ಅಮರ್ತ್ಯಸೇನ್ ರವರ ಕೆಳಕಂಡ ಎರಡು ಮಹತ್ವದ ಪ್ರಬಂಧಗಳನ್ನು ಗಮನಿಸಬಹುದು.

1. Gender and Co-operative Conflicts(1990:123-149)

2. Women's Agency and Social Progress (1990:189-203)

ಮಹಿಳಾ ಅಧ್ಯಯನದಲ್ಲಿ, ಮುಖ್ಯವಾಗಿ ಲಿಂಗಸಂಬಂಧಗಳು ಮತ್ತು ಅಭಿವೃದ್ಧಿಗಳ ನಡುವಿನ ಆಶ್ಲೇಷದ ಬಗ್ಗೆ ಆಸಕ್ತಿಯಿರುವವರು ಅಗತ್ಯವಾಗಿ ಮೊದಲ ಲೇಖನವನ್ನು ಗಮನಿಸಬೇಕು.

ಎರಡನೆಯ ಪ್ರಬಂಧದ ಕನ್ನಡ ಅನುವಾದಕ್ಕೆ ನೋಡಿ : 'ಮಹಿಳೆಯರ ನಿಯೋಗ ಮತ್ತು ಸಾಮಾಜಿಕ ಬದಲಾವಣೆ' ಅನು : ಟಿ.ಆರ್ .ಚಂದ್ರಶೇಖರ, ಅಭಿವೃದ್ಧಿ ಅಧ್ಯಯನ, ಸಂ.೨. ಸಂ.೧, ಜನವರಿ ೨೦೦೩, ಪುಟಗಳು : ೩೮-೫೭

◆◆

೪

# ರಾಜಕೀಯ ವೈಫಲ್ಯದ ಸಂಕಥನ

"On the 26th January 1950, we are going to enter into a life of contradictions. In politics we will have equality and in social and economic life we will have inequality" Dr.B.R.Ambedkar(Quoted in Jean Dreze and Amartya Sen, 2002:375).

"In any case, the distributional impact of economic changes such as the green revolution, structural adjustment and the expansion of non-agricultural employment is probably a much less important issue than the resilience of base-line inequalities of ownership, caste and gender. And that is also where there is greater scope for positive change through public action" Jean Dreze(1997:170)

".....Prosperity at the comparatively small top of the rural order has increased for more rapidly than the rate at which poverty at its much broader bottom has decreaed. The trend towards progressive inequality evinced by this is not only of an economic dimension but also of a political nature. Property and power are the organising principles of a social division in the village, separating and distancing the strong from the weak" Jan Breman(1997:57).

ಮೇಲಿನ ಮೂರು ಉಲ್ಲೇಖಗಳಲ್ಲಿ ಒಂದು ಸಾಮಾನ್ಯ ಎಳೆಯನ್ನು ಗುರುತಿಸುವುದು ಕಷ್ಟವಾಗಬೇಕಿಲ್ಲ. ಅಂಬೇಡ್ಕರ್‌ರವರು 'ಕಾಂಟ್ರಡಿಕ್ಷನ್ಸ್' ಬಗ್ಗೆ ಮಾತನಾಡಿದರೆ ಜೀನ್ ಡ್ರೀಜ್ 'ಬೇಸ್‌ಲೈನ್ ಇನೀಕ್ವಾಲಿಟಿ' ಬಗ್ಗೆ ಮಾತನಾಡುತ್ತಿದ್ದಾನೆ. ಜನ್ ಬ್ರೆಮನ್‌ರವರು ಇದನ್ನೇ 'ಪ್ರೊಗ್ರೆಸಿವ್ ಇನೀಕ್ವಾಲಿಟಿ'ಯೆಂದು ಕರೆದಿದ್ದಾರೆ. ಅಂಬೇಡ್ಕರ್ ಗುರುತಿಸಿರುವ ವೈರುದ್ಧಗಳನ್ನು ಹೋಗಲಾಡಿಸಲು ನಮಗೆ ಸಾಧ್ಯವಾಗಿಲ್ಲ. ಈ ವೈರುಧ್ಯಗಳು ಆರೋಹಣ ಕ್ರಮದಲ್ಲಿ ಬೆಳೆಯುತ್ತಿರುವುದರ ಬಗ್ಗೆ ಬ್ರೆಮನ್ ನಮ್ಮ ಗಮನ ಸೆಳೆಯುತ್ತಿದ್ದಾರೆ. ಸಾಮಾಜಿಕ ರಚನೆಯಲ್ಲಿನ ತುತ್ತ ತುದಿಯಲ್ಲಿನ ಉನ್ನತ ವರ್ಗಗಳ ವರಮಾನ-ಅಧಿಕಾರ ಎಷ್ಟರಮಟ್ಟಿಗೆ ಏರಿಕೆಯಾಗುತ್ತಿದೆ ಎಂಬುದಕ್ಕಿಂತ ರಚನೆಯ ಅಡಿಯಲ್ಲಿ ವಿಸ್ತೃತವಾಗಿರುವ ಅಸಮಾನತೆಗಳು ತೀವ್ರಗೊಳ್ಳುತ್ತಿರುವುದು ನಮಗೆ

ಮುಖ್ಯವಾಗಬೇಕು ಎಂಬ ಜೀನ್ ಡ್ರೀಜ್‌ನ ಮಾತುಗಳು ತುಂಬಾ ಅರ್ಥಗರ್ಭಿತವಾಗಿವೆ. ಒಂದು ಸಂಗತಿಯನ್ನು ಸ್ಪಷ್ಟವಾಗಿ ಹೇಳಬಹುದು. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ನಮ್ಮ ಗ್ರಾಮಗಳು ಪಿರಿಮಿಡ್ಡಿನ ರಚನೆಯನ್ನು ಹೊಂದಿದ್ದಾವೆ.

ಚಿತ್ರ ೪.೧ರಲ್ಲಿ ನಮ್ಮ ಗ್ರಾಮೀಣ ಪ್ರದೇಶದ ಸಾಮಾಜಿಕ ರಚನೆಯನ್ನು ಪಿರಿಮಿಡ್ಡಿನೋಪಾದಿಯಲ್ಲಿ ರಚಿಸಲಾಗಿದೆ. ಮೇಲೆ ಉಲ್ಲೇಖಿಸಿರುವ ಉಲ್ಲೇಖಗಳ ಸತ್ವವನ್ನು ಇಲ್ಲಿ ಹಿಡಿದಿಡಲಾಗಿದೆ. ಈ ಪಿರಿಮಿಡ್ಡಿನ ತುತ್ತ ತುದಿಯು ತುಂಬಾ ಕಿರಿದಾಗಿದೆ-ಇಕ್ಕಟ್ಟಿನಿಂದ ಕೂಡಿದೆ. ಈ ಹಂತದಲ್ಲಿರುವ ಜನರ ಪ್ರಮಾಣ ಕಡಿಮೆ. ಇಲ್ಲಿನ ಜನವರ್ಗದ ಲಕ್ಷಣವೇನೆಂದರೆ, ಇಲ್ಲಿ ಅಕ್ಷರಸ್ಥರ ಪ್ರಮಾಣ ಅಧಿಕ. ಆರ್ಥಿಕವಾಗಿ ತೀವ್ರ ಚಲನಶೀಲವಾದ ಜನವರ್ಗ ಇದಾಗಿದೆ. ಈ ವರ್ಗದ ಜನರ ವರಮಾನವು ತೀವ್ರಗತಿಯಲ್ಲಿ ಬೆಳೆಯುತ್ತಿರುತ್ತದೆ. ಸಮಾಜದಲ್ಲಿ ಉಂಟಾಗುವ ಎಲ್ಲ ಬದಲಾವಣೆಗಳನ್ನು ಇದು ತನ್ನ ತೆಕ್ಕೆಗೆ ತೆಗೆದುಕೊಂಡು ಬಿಡುತ್ತದೆ. ಉದಾಹರಣೆಗೆ ೧೯೯೦ರ ದಶಕದಲ್ಲಿ ಉಂಟಾದ ಮಾಹಿತಿಜ್ಞಾನದ ಕ್ರಾಂತಿಯನ್ನು ಇದು ತನ್ನದಾಗಿಸಿಕೊಂಡಿತು. ನಮ್ಮ ಗ್ರಾಮಗಳು ಜಾಗತೀಕರಣಗೊಂಡಿದ್ದಾವೆ ಎಂದಾಗ ಅದು ಪಿರಿಮಿಡ್ಡಿನ ತುತ್ತತುದಿಯ ಕಿರಿದಾದ ಪ್ರದೇಶದ ಜನವರ್ಗವನ್ನು ಗಮನದಲ್ಲಿಟ್ಟುಕೊಂಡು ಹೇಳಿದಂತೆ ಭಾಸವಾಗುತ್ತದೆ. ಅಂಬೇಡ್ಕರ್ ಹೇಳಿದಂತೆ ಪಿರಿಮಿಡ್ಡಿನ ಮೂರು ಮಜಲಿನ ಜನರಿಗೆ ಸಮಾನವಾದ ರಾಜಕೀಯ ಹಕ್ಕುಗಳು ಇವೆ. ಆದರೆ ಬಿಕ್ಕಟ್ಟು-ಇಕ್ಕಟ್ಟು ಎಲ್ಲಿದೆಯೆಂದರೆ ಆರ್ಥಿಕ ಮತ್ತು ಸಾಮಾಜಿಕ ಸಂಗತಿಗಳಲ್ಲಿದೆ. ತುತ್ತತುದಿ ಮತ್ತಷ್ಟು ಕಿರಿದಾಗುತ್ತ ಹೋಗುವುದು ಮತ್ತು ಅಡಿಪಾಯವು ಮತ್ತಷ್ಟು ಹಿಗ್ಗುತ್ತಾ ಹೋಗುವ ಪರಿಯನ್ನೇ ಜನ್‌ಬ್ರೆಮನ್ ಅವರು ಆರೋಹಣವಾದಿ ಅಸಮಾನತೆಯೆಂದು ಕರೆದಿದ್ದಾರೆ. ಜೀನ್ ಡ್ರೀಜ್‌ರವರು ಇದನ್ನೇ ನಮ್ಮ ಸಮಾಜಕ್ಕೆ ವಿಶಿಷ್ಟವಾದ ಅಸಮಾನತೆಗಳ ಬಗ್ಗೆ ಗಮನ ಸೆಳೆದಿದ್ದಾರೆ. ಅಮರ್ತ್ಯಸೇನ್‌ರವರು ಜೀನ್ ಡ್ರೀಜ್ ಜೊತೆ ಸಿದ್ಧಪಡಿಸಿರುವ (೨೦೦೨:೩೫೩) ಕೃತಿಯಲ್ಲಿ 'ಅನೂಚಾನವಾಗಿ ಹರಿದುಕೊಂಡು ಬಂದಿರುವ ಸಾಮಾಜಿಕ ಅಸಮಾನತೆ'ಗಳನ್ನು ಕುರಿತ ಸಮಸ್ಯೆಗಳ ಬಗ್ಗೆ ಚರ್ಚೆ ಮಾಡಿದ್ದಾರೆ. ಎಲ್ಲರೂ ಒಂದೇ ವಿಷಯವನ್ನು ಕುರಿತಂತೆ ವಿಭಿನ್ನ ಪರಿಭಾಷೆಯಲ್ಲಿ ಮಾತನಾಡುತ್ತಿದ್ದಾರೆ.

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ನಾವು ಭೇಟಿ ಮಾಡಿದ ಹಳ್ಳಿಗಳಲ್ಲಿ, ಕ್ಷೇತ್ರಕಾರ್ಯ ನಡೆಸಿದ ಗ್ರಾಮಗಳಲ್ಲಿ ಪಿರಿಮಿಡ್ಡಿನೋಪಾದಿಯ ಸಾಮಾಜಿಕ ರಚನೆಗೆ ಭಿನ್ನವಾದ ಚಿತ್ರವೇನೂ ಗೋಚರಿಸಲಿಲ್ಲ. ಅಂಬೇಡ್ಕರ್ ಗುರುತಿಸಿರುವ ವೈರುಧ್ಯಗಳ ವೈರುಧ್ಯಗಳೇನೆಂದರೆ ಆ ವೈರುಧ್ಯಗಳು-ವಿಷಮತೆಯು ಸಂಘರ್ಷದ ರೂಪ ಪಡೆದುಕೊಂಡಿಲ್ಲ. ಪಿರಿಮಿಡ್ಡಿನ ಅಡಿಪಾಯದಲ್ಲಿ ಅಸಹನೆ-ಅಸಮಧಾನವು ಆಸ್ಫೋಟಕಾರಿ ಸ್ವರೂಪ ಪಡೆದುಕೊಳ್ಳುತ್ತಿಲ್ಲ. ಇದನ್ನೇ ನಾವು 'ರಾಜಕೀಯ ವೈಫಲ್ಯದ ಸಂಕಥನ'ವೆಂದು ಕರೆದಿ

ಚಿತ್ರ ೪.೧.



ಪಿರಿಮಿಡ್ಡಿನೋಪಾದಿಯ ಗ್ರಾಮೀಣ ಸಾಮಾಜಿಕ ರಚನೆ

ದ್ದೇವೆ. ಅಂಬೇಡ್ಕರ್ ಹೇಳಿದ ವೈರುಧ್ಯಗಳು ಮುಂದುವರಿಯುತ್ತಿವೆ. ನಮಗೆ ಸ್ವಾತಂತ್ರ ಬಂದ ಆಗಸ್ಟ್ ೧೪, ೧೯೪೭ರ ಘಳಿಕೆಯಲ್ಲಿ ನೆಹರೂ ಗುರುತಿಸಿದ್ದ ದೇಶದ ಮುಂದಿನ ಸವಾಲುಗಳಾದ ಬಡತನ, ಅಜ್ಞಾನ, ಅಸ್ವಸ್ಥತೆ, ಅವಕಾಶಗಳಲ್ಲಿನ ಅಸಮಾನತೆಗಳ ನಿವಾರಣೆಗಳು ಇಂದಿಗೂ ಸವಾಲುಗಳಾಗಿ ಮುಂದುವರಿಯುತ್ತಿವೆ. ಜೀನ್ ಡ್ರೀಜ್ ಹೇಳು 'ಬೇಸ್ ಲೈನ್' ಅಸಮಾನತೆ ಉಲ್ಬಣಗೊಳ್ಳುತ್ತಾ ನಡೆದಿದೆ. ಜನ್‌ಬ್ರೆಮನ್ ಹೇಳುವ ಆರೋಹಣವಾದಿ ಅಸಮಾನತೆ ಅನಿರ್ಬಂಧಿತವಾಗಿ ಮುಂದುವರಿದಿದೆ.

ಈಗಾಗಲೆ ತಿಳಿಸಿರುವಂತೆ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಯರೆಹಂಚನಾಳ ಗ್ರಾಮಪಂಚಾಯತಿ ವ್ಯಾಪ್ತಿಯ ಮೂರು ಗ್ರಾಮಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಮಾಡಿದ್ದೇವೆ (೨೦೦೨-೦೩). ಆ ಗ್ರಾಮಪಂಚಾಯತಿಯ ಉಪಾಧ್ಯಾಕ್ಷರ ಹೆಸರು ಶ್ರೀ ಚಲವಾದಿ. ಮೀಸಲಾತಿ ಸೌಲಭ್ಯದಿಂದಾಗಿ ಅವರು ಉಪಾಧ್ಯಕ್ಷರಾಗಿದ್ದಾರೆ. ಅವರ ವರಮಾನದ ಮೂಲ ಕೂಲಿ. ಆಸ್ತಿ-ಪಾಸ್ತಿ ಏನೂ ಇಲ್ಲ. ರಾಜಕೀಯ ಅವಕಾಶಗಳು ಸಮಾಜದ ಎಲ್ಲ ವರ್ಗಗಳಿಗೆ ವಿಸ್ತರಣೆಯಾಗಿರುವುದರಿಂದ ಅವರು ಪಂಚಾಯತಿಯ ಉಪಾಧ್ಯಕ್ಷರಾಗಿದ್ದಾರೆ. ಉಪಾಧ್ಯಕ್ಷ ಸ್ಥಾನವು ಒಂದು ಪ್ರತಿಷ್ಠಿತ ಸ್ಥಾನಮಾನವಾಗಿದೆ. ಈ ಪ್ರತಿಷ್ಠೆಯಿಂದಾಗಿ-ಹುದ್ದೆಯ ಘನತೆಯಿಂದಾಗಿ ಅವರು ಈಗ ಕೂಲಿ ಮಾಡುವಹಾಗಿಲ್ಲ.

ಕೂಲಿ ಮಾಡದೆ ಬದುಕು ಹೇಗೆ ಸಾಗಬೇಕು? ಉಪಾಧ್ಯಕ್ಷ ಸ್ಥಾನವು ವರಮಾನವನ್ನು ತಂದುಕೊಡುವುದಿಲ್ಲ. ಇದರಿಂದಾಗಿ ಉಂಟಾಗಿರುವ ವಿಚಿತ್ರ ಸನ್ನಿವೇಶ ಇಲ್ಲಿದೆ. ಈ ಉಪಾಧ್ಯಕ್ಷರ ಹೆಂಡತಿ ಈಗ ಕೂಲಿ ಮಾಡಿ ಕುಟುಂಬವನ್ನು ಸಾಕುವ ಸ್ಥಿತಿ ನಿರ್ಮಾಣವಾಗಿದೆ. ಆರ್ಥಿಕ ಅಭ್ರತೆಯಿಂದ ನರಳುತ್ತಿರುವ ಇವರು ಉಪಾಧ್ಯಕ್ಷರಾಗಿ ಪಂಚಾಯತಿ ಸಭೆಗಳಲ್ಲಿ-ಸಾಮಾಜಿಕ ಸಭೆಗಳಲ್ಲಿ ಅಧಿಕಾರಯುತವಾಗಿ ಮಾತನಾಡಲು ಹೇಗೆ ಸಾಧ್ಯ? ಅಂಬೇಡ್ಕರ್ ಹೇಳಿದ್ದು ಇಂತಹ ವೈರುಧ್ಯದ ಬಗ್ಗೆ ಎಂಬುದನ್ನು ಗುರುತಿಸುವುದು ನಮಗೆ ಕಷ್ಟವಾಗಬೇಕಿಲ್ಲ. ರಾಜಕೀಯ ಸಮಾನತೆ ಶ್ರೀ ಚಲವಾದಿಯವರಿಗೆ ದೊರಕಿದೆ. ಆದರೆ ಆರ್ಥಿಕ ಅಭ್ರತೆಯನ್ನು ಅದು ಹೋಗಲಾಡಿಸುವುದಿಲ್ಲವಲ್ಲ!

**ಜನರ ಸಂಘಟನೆ**

ಅಭಿವೃದ್ಧಿಯನ್ನು ತಳಮಟ್ಟದಿಂದ ಮೇಲುಮಟ್ಟಕ್ಕೆ ಹರಿಯುವಂತೆ ಮಾಡಬೇಕು ಎಂಬ ವಿಚಾರ ಕಳೆದ ೩- ೪ ದಶಕಗಳಿಂದ ಕೇಳಿಬರುತ್ತದೆ. ವಿಕೇಂದ್ರೀಕರಣಕ್ಕೆ ಇರುವ ಒಂದು ತಾತ್ವಿಕ ಸಮರ್ಥನೆಯೆಂದರೆ ಇದೆ ಆಗಿದೆ. ಅಭಿವೃದ್ಧಿಯು ಜನರ ಸಹಭಾಗಿತ್ವದಲ್ಲಿ ನಡೆಯಬೇಕಾದರೆ ಅದು ತಳಮಟ್ಟದಿಂದ ಆರಂಭವಾಗಿ ಮೇಲ್ಮಟ್ಟಕ್ಕೆ ಹರಿಯುವಂತಾಗ ಬೇಕು. ಅಭಿವೃದ್ಧಿಯು ತಳಮಟ್ಟದಲ್ಲಿ ಆರಂಭವಾಗಬೇಕು ಎಂಬುದನ್ನು ಶಾಬ್ದಿಕವಾಗಿ ತೆಗೆದು ಕೊಳ್ಳಬಾರದು. 'ತಳಮಟ್ಟ' ಅಥವಾ 'ಬುಡಮಟ್ಟ' ಅಂದಾಗ ಅದು ಕೇವಲ ಲಂಬಾಕಾರದ ತಳಮಟ್ಟ ಮಾತ್ರವೆಂದು ತಿಳಿಯಬೇಕಾಗಿಲ್ಲ. ತಳಮಟ್ಟದಲ್ಲಿ ಅಭಿವೃದ್ಧಿ ಯಿಂದ ಯಾರು ವಂಚಿತರಾಗಿದ್ದಾರೋ ಅವರನ್ನು ಒಳಗೊಳ್ಳುವ ಪ್ರಕ್ರಿಯೆಯನ್ನು ತಳಮಟ್ಟದ ಅಭಿವೃದ್ಧಿ ಎನ್ನಬಹುದು. ಅಭಿವೃದ್ಧಿಯ ಫಲಗಳು ಮೇಲಿನಿಂದ ಕೆಳಮುಖಿಯಾಗಿ ಹರಿಯುವಂತೆ ಮಾಡುವ ಅಭಿವೃದ್ಧಿಯ ತಂತ್ರವು ಪ್ರಚಲಿತದಲ್ಲಿದೆ. ಈ ಬಗೆಯ ಅಭಿವೃದ್ಧಿಯ ತಂತ್ರವು 'ಸಾಮಾಜಿಕ ಡಾರ್ವಿನಿಸಮ್' ಆಧರಿಸಿದ ವಿಚಾರ ಪ್ರಣಾಳಿಕೆಯಾಗಿದೆ. ಮೇಲಿನಿಂದ ಕೆಳಗಿನ ಮಜಲಿಗೆ ಹರಿಯುವ ಅಭಿವೃದ್ಧಿ ತಂತ್ರವನ್ನು ತಲೆ ಕೆಳಗು ಮಾಡಬೇಕಾಗಿದೆ. ಇದನ್ನು ತಲೆಕೆಳಗು ಮಾಡಲು ಸಾಧ್ಯವಾಗದಿ ರುವ ಪರಿಯನ್ನು 'ರಾಜಕೀಯ ವೈಫಲ್ಯ'ವೆಂದು ಕರೆಯಲಾಗಿದೆ. ಇದನ್ನು ಜೀನ್ ಡ್ರೀಜ್ ಮತ್ತು ಅಮರ್ತ್ಯ್‌ಸೆನ್ ಅವರು 'ಸಾಮಾಜಿಕ ವೈಫಲ್ಯ'ವೆಂದು ಕರೆದಿದ್ದಾರೆ (೧೯೯೫:೯೭). ಸಾಮಾಜಿಕ ವೈಫಲ್ಯವನ್ನು ಅವರು ತುಂಬಾ ವ್ಯಾಪಕವಾದ ನೆಲೆಯಲ್ಲಿ ಪರಿಭಾವಿಸಿ ಕೊಂಡಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಬಡವರನ್ನು, ದುರ್ಬಲರನ್ನು, ದಲಿತರನ್ನು, ಮಹಿಳೆಯರನ್ನು 'ಸಾಧನ'ವಾಗಿ ಹಾಗೂ 'ಸಾಧ್ಯ'ವೂ ಆಗಿ ಒಳಗೊಳ್ಳದಿರುವ ಅಭಿವೃದ್ಧಿ ಪ್ರಕ್ರಿಯೆಯನ್ನು 'ರಾಜಕೀಯ ವೈಫಲ್ಯ'ವೆಂದು ಕರೆಯಲಾಗಿದೆ. ರಜನಿ ಕೊಥಾರಿಯವರು ಸರಿಯಾಗಿ ಗುರುತಿಸಿರುವಂತೆ ತಳಮಟ್ಟದಲ್ಲಿರುವ ಜನರನ್ನು, ಅವರ ಅಗತ್ಯಗಳಿಗೆ, ಹಿತಾಸಕ್ತಿಗಳಿಗೆ ಸಂಘರ್ಷ ನಡೆಸಲು ಸಂಘಟಿಸುವುದು ತುಂಬಾ ಅಗತ್ಯ(೧೯೯೬:೪೦).

ಈ ರಾಜಕೀಯ ವೈಫಲ್ಯವನ್ನು- ಸಾಮಾಜಿಕ ವೈಫಲ್ಯವನ್ನು ತೊಡೆದು ಹಾಕಲು ಮೂರು ಕ್ರಮಗಳನ್ನು ಜೀನ್‌ಡ್ರೀಜ್ ಮತ್ತು ಅಮರ್ತ್ಯಸೇನ್ ಸೂಚಿಸುತ್ತಾರೆ(೧೯೯೫:೧೦೪-೧೦೫). ಅವುಗಳು ಹೀಗಿವೆ.

೧. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ರಾಜಕಾರಣಕ್ಕೆ ಅಗ್ರಗಣ್ಯ ಪಾತ್ರ ನೀಡಬೇಕು.

೨. ವಂಚಿತ ವರ್ಗವನ್ನು ರಾಜಕೀಯವಾಗಿ ಸಂಘಟಿಸಲು ಪರಿಣಾಮಕಾರಿ ಕ್ರಮಗಳನ್ನು ಅನುಸರಿಸಬೇಕು.

೩. ರಾಜಕೀಯ ಚಟುವಟಿಕೆಗಳಲ್ಲಿ ಯಶಸ್ವಿಯಾಗಿ ಭಾಗವಹಿಸಲು ಅಗತ್ಯವಾದ ಮೂಲ ಶಿಕ್ಷಣವನ್ನು ಒದಗಿಸುವುದು.

ರಾಜಕೀಯ ವೈಫಲ್ಯದಲ್ಲಿ ನಮ್ಮ ಸಮಾಜದ ಸಂದರ್ಭದಲ್ಲಿ ರಾಜಕೀಯಪಕ್ಷಗಳ ಪಾಲು ಅಧಿಕವಾಗಿದೆ. ವೈಫಲ್ಯದ ಜವಾಬುದಾರಿಯನ್ನು ರಾಜಕೀಯ ಪಕ್ಷಗಳು ಭರಿಸಬೇಕಾಗಿದೆ. ಜನರ ಸಂಘಟನೆಯಲ್ಲಿ, ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿನ ಬಡವರನ್ನು, ದುರ್ಬಲರನ್ನು, ದಲಿತರನ್ನು, ಮಹಿಳೆಯರನ್ನು ಸಂಘಟಿಸುವ-ರಾಜಕೀಯ ಶಕ್ತಿಯಾಗಿ ರೂಪಿಸುವ ದಿಶೆಯಲ್ಲಿ ಎಲ್ಲ ರಾಜಕೀಯ ಪಕ್ಷಗಳು ವಿಫಲಗೊಂಡಿವೆ. ಬಡವರನ್ನು, ದುರ್ಬಲರನ್ನು, ದಲಿತರನ್ನು, ಮಹಿಳೆಯರನ್ನು ರಾಜಕೀಯ ಶಕ್ತಿಯಾಗಿ ಸಂಘಟಿಸದೆ ಇರುವುದರಿಂದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನರ ಜಾಗೃತ ಸಹಭಾಗಿತ್ವ ಸಾಧ್ಯವಾಗುತ್ತಿಲ್ಲ. ಸಹಭಾಗಿತ್ವವೆಂದರೆ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವ, ನೀತಿ ನಿರ್ಣಯ ಪ್ರಕ್ರಿಯೆಯಲ್ಲಿ ಅಂಚಿನಲ್ಲಿರುವ ದುರ್ಬಲರು ದಲಿತರು ತಮ್ಮ ಅಧಿಕಾರವನ್ನು ಒತ್ತಾಯಿಸುವ ಒಂದು ಪರಿ ಎಂದು ನಿರ್ವಚಿಸಲಾಗಿದೆ (ಪ್ರದೀಪ್ ನಾರಾಯಣ, ೨೦೦೩:೨೪೮೪).

ಜನರ ಸಂಘಟನೆಯಿಲ್ಲದೆ ಗ್ರಾಮೀಣ ಪ್ರದೇಶದಲ್ಲಿರುವ ಅಧಿಕಾರ ಸಂಬಂಧವನ್ನು ಬದಲಾಯಿಸಲು ಸಾಧ್ಯವಿಲ್ಲ. ಅಸ್ತಿತ್ವದಲ್ಲಿರುವ ಅಧಿಕಾರ ಸಂಬಂಧಗಳ ಪುನರುತ್ಪಾದನೆ ಕೊನೆಗೊಳ್ಳಬೇಕಾದರೆ ಬಡವರು- ದುರ್ಬಲರು-ದಲಿತರು ತಮ್ಮ ಹಕ್ಕು ಅಧಿಕಾರಗಳನ್ನು ಸಂಘಟಿತ ರೀತಿಯಲ್ಲಿ ಒತ್ತಾಯಿಸುವಂತಾಗಬೇಕು. ಗ್ರಾಮೀಣ ಪ್ರದೇಶದಲ್ಲಿ ಬಡವರ ಹಿತಾಸಕ್ತಿಗಳು ಯಾಕೆ ಅಭಿವೃದ್ಧಿಯ ಏಕೈಕ ಆದ್ಯತೆಯಾಗುತ್ತಿಲ್ಲ? ರಾಜಕೀಯ ವೈಫಲ್ಯ ಅಥವಾ ಸಾಮಾಜಿಕ ವೈಫಲ್ಯಕ್ಕೆ ಮುಖ್ಯ ಕಾರಣವೆಂದರೆ ಅಂಚಿನಲ್ಲಿರುವ ವಂಚಿತರು 'ದನಿ' ಕಳೆದುಕೊಂಡಿರುವುದಾಗಿದೆ. ಮೀಸಲಾತಿಯನ್ನು ನೀಡಿ ರಾಜಕೀಯ ಪಕ್ಷಗಳು ದಲಿತರ-ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ತಮ್ಮ ಜವಾಬುದಾರಿಯನ್ನು ತೊಳೆದುಕೊಂಡು ಬಿಟ್ಟಿವೆ.

ಪ್ರಸ್ತುತ ಅಧ್ಯಯನದಲ್ಲಿ ಪ್ರತಿಪಾದಿಸಿರುವಂತೆ ಅಭಿವೃದ್ಧಿಯಾಗಲಿ ಅಥವಾ ವಿಕೇಂದ್ರೀಕರಣವಾಗಲಿ, ಮಹಿಳೆಯರ ಸಬಲೀಕರಣವಾಗಲಿ-ಅಸ್ತಿತ್ವದಲ್ಲಿರುವ ಅಸಮ-

ಯಾಜಮನ್ಯ-ಜಾತಿ ಸಂಬಂಧಗಳಿಗೆ ಭಿನ್ನವಾದ ರೀತಿಯಲ್ಲಿ ಸಂಭವಿಸಲು ಸಾಧ್ಯವಿಲ್ಲ ವೆಂಬುದನ್ನು ಸಿದ್ಧಮಾಡಿಕೊಡಲಾಗಿದೆ. ಈ ಅಸಮ-ಯಾಜಮಾನ್ಯ-ಜಾತಿ ಸಂಬಂಧಿ ರಚನೆಯನ್ನು ನಾಶ ಮಾಡದೆ ಅಭಿವೃದ್ಧಿಯು ವಂಚಿತರನ್ನು, ಅಂಚಿನಲ್ಲಿರುವವರನ್ನು ತಲುಪುವುದು ಸಾಧ್ಯವಿಲ್ಲ. ಸಾಮಾಜಿಕ ಪಿರಿಮಿಡ್ಡನ್ನು ತಲೆಕೆಳಗು ಮಾಡುವ ಅಗತ್ಯವಿದೆ. ಇಲ್ಲದಿದ್ದರೆ ಅಭಿವೃದ್ಧಿಯೆನ್ನುವುದು ಈಗಾಗಲೆ ತುಂಬಿರುವ ಕೊಡಕ್ಕೆ ನೀರನ್ನು ತುಂಬುತ್ತಾ ಹೋಗುತ್ತದೆ. ಅದರಿಂದ ಸಿಡಿದು ಬಂದ ಹನಿ ನೀರಿನಂತೆ, ಅಭಿವೃದ್ಧಿಯು ಭಿಕ್ಷೆಯಂತೆ-ದಾನದಂತೆ ಬಡವರ ದುರ್ಬಲರ ವಂಚಿತರ ಪಾಲಾಗುತ್ತಿರುತ್ತದೆ.

◆◆

೫

# ಸಮಾರೋಪ

'ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ : ರಾಜಕೀಯ ವೈಫಲ್ಯದ ಒಂದು ಸಂಕಥನ'ವೆಂಬ ಪ್ರಸ್ತುತ ಅಧ್ಯಯನದಲ್ಲಿ ಅಭಿವೃದ್ಧಿ- ವಿಕೇಂದ್ರೀಕರಣಗಳು ಗ್ರಾಮಾಂತರ ಪ್ರದೇಶದಲ್ಲಿ ಅಸ್ತಿತ್ವದಲ್ಲಿರುವ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಪುನರುತ್ಪಾದನೆ ಮಾಡುವ ಪರಿಯಲ್ಲಿ ಸಂಭವಿಸುತ್ತಿವೆ ಎಂಬ ಸಂಗತಿಯನ್ನು ಸಿದ್ಧಮಾಡಲು ಪ್ರಯತ್ನಿಸಲಾಗಿದೆ. ತಳಮಟ್ಟದ ಅಭಿವೃದ್ಧಿ-ಸಹಭಾಗಿತ್ವದ ಅಭಿವೃದ್ಧಿ ಎಂದೆಲ್ಲ ಏನೇ ಹೇಳಿದರೂ ಅದು ಸಮಾಜದ ಉನ್ನತ ಜಾತಿ ವರ್ಗಗಳ ಅಗತ್ಯಗಳನ್ನು ಪೂರೈಸುವಲ್ಲಿ ಹೆಚ್ಚು ಕ್ರಿಯಶೀಲವಾಗಿರುವಂತೆ ಕಾಣುತ್ತದೆ. ಗ್ರಾಮೀಣ ಪ್ರದೇಶದಲ್ಲಿನ ವಂಚಿತರ, ಬಡವರ, ಅನಕ್ಷರಸ್ಥರ, ದುರ್ಬಲರ, ಮಹಿಳೆಯರ, ದಲಿತರ ಅಗತ್ಯಗಳನ್ನು ಈಡೇರಿಸುವಲ್ಲಿ ಅಭಿವೃದ್ಧಿ ವಿಫಲಗೊಂಡಿದೆ. ವಿಕೇಂದ್ರೀಕರಣ ಪ್ರಯೋಗದ ಮೂಲಕ ಅಧಿಕಾರವನ್ನು ತಳಮಟ್ಟಕ್ಕೆ ಒಯ್ಯಲಾಗಿದೆ. ಸಮಾಜದ ಎಲ್ಲ ವರ್ಗ-ಜಾತಿಯ ಜನರೂ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಹಭಾಗಿಗಳಾಗುವಂತೆ ಮಾಡಲು ಅನೇಕ ಕಾರ್ಯಕ್ರಮಗಳನ್ನು ರೂಪಿಸ ಲಾಗಿದೆ.

ಅಭಿವೃದ್ಧಿಯ ಫಲಗಳು ವಂಚಿತರಿಗೆ ತಲುಪುತ್ತಿಲ್ಲ ಯಾಕೆ? ಪ್ರಜಾಪ್ರಭುತ್ವ ವಿಕೇಂದ್ರೀಕರಣ ದುರ್ಬಲರನ್ನು ಸಬಲರನ್ನಾಗಿ ಮಾಡುತ್ತಿಲ್ಲ ಯಾಕೆ? ಲಿಂಗ ಸಮಾತನತೆ ಯಂತಹ ಸಂಗತಿ ಆದ್ಯತೆಯಾಗುವುದಿಲ್ಲ ಯಾಕೆ? ಇಲ್ಲಿರುವ ಮೂಲ ಸಮಸ್ಯೆಯೆಂದರೆ ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿಗಳನ್ನು ಸಂದರ್ಭದ ಚೌಕಟ್ಟನ್ನು ಬಿಟ್ಟು, ಮೌಲ್ಯ ವಿವೇಚನೆಯ ನೆಲೆಗೆ ಅತೀತವಾಗಿ ಪರಿಭಾವಿಸಿಕೊಂಡಿರುವುದರಲ್ಲಿದೆ. ಅಭಿವೃದ್ಧಿಯ ಫಲಗಳು, ವಿಕೇಂದ್ರೀಕರಣದ ಸೌಲಭ್ಯಗಳು, ಲಿಂಗಸಮಾನತೆಯಂತಹ ಉದ್ದೇಶಗಳು ನಿರೀಕ್ಷಿಸಿದ- ನಿಗದಿಪಡಿಸಿದ ಗುರಿಯನ್ನು ಈಡೇರಿಸುವುದರಲ್ಲಿ ಕಂಡ ಸೋಲನ್ನೇ ಪ್ರಸ್ತುತ ಅಧ್ಯಯನದಲ್ಲಿ ರಾಜಕೀಯ ವೈಫಲ್ಯವೆಂದು ಕರೆಯಲಾಗಿದೆ.

ಬಡವರನ್ನು, ದುರ್ಬಲರನ್ನು, ಮಹಿಳೆಯರನ್ನು ಅಭಿವೃದ್ಧಿ ಒಳಗು ಮಾಡಿಕೊಳ್ಳುವಂತೆ ಮಾಡಲು ಏನು ಮಾಡಬೇಕು? ಅಭಿವೃದ್ಧಿಯೆನ್ನುವುದು ಬಡವರ-ದುರ್ಬಲರ-ಮಹಿಳೆಯರ

ಸಂಘಟಿತ ಒತ್ತಾಯವಾಗಿಲ್ಲ ಏಕೆ? ರಾಜಕೀಯ ಪಕ್ಷಗಳು ಬಡವರ ದಲಿತರ ಸಂಘಟನೆಯಲ್ಲಿ ಯಾಕೆ ಆಸಕ್ತಿತಳೆದಿಲ್ಲ? ಲಾಗಾಯ್ತಿನಿಂದಲೂ ಅನೂಚಾನವಾಗಿ ಹರಿದುಕೊಂಡು ಬಂದಿರುವ ಉನ್ನತವರ್ಗ-ಜಾತಿಪರವಾದಂತಹ ಕೆಳಜಾತಿ-ವರ್ಗಕ್ಕೆ ಪೂರಕವಲ್ಲದ ಮೌಲ್ಯ ವ್ಯವಸ್ಥೆಯ ಪರಿಣಾಮವಾಗಿ ಬಡವರು, ದುರ್ಬಲರು, ಮಹಿಳೆಯರು, ದಲಿತರು ಅಭಿವೃದ್ಧಿಯಿಂದ ವಂಚಿತರಾಗಿದ್ದಾರೆ ಎಂಬುದು ಜನರ ಅರಿವಿಗೆ ಬಂದಿಲ್ಲ. ಇಂತಹ ವ್ಯವಸ್ಥೆಯಲ್ಲಿ ಸಂಭವಿಸುವ ಅಭಿವೃದ್ಧಿಯು ಬಡವರಿಗೆ ಪೂರಕವಾಗಿರಲು ಸಾಧ್ಯವಿಲ್ಲ.

ಇದಕ್ಕೆ ಪರಿಹಾರವೆಂದರೆ ಬಡವರ ದುರ್ಬಲರ ರಾಜಕೀಯ ಸಂಘಟನೆ. ರಾಜಕೀಯ ಪಕ್ಷಗಳು ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುವಂತಾಗಬೇಕು. ಮೀಸಲಾತಿಯಂತಹ ಕ್ರಮಗಳು ಏಕಪಕ್ಷೀಯವಾಗಿ ಆರ್ಥಿಕ-ಸಾಮಾಜಿಕ ಬದಲಾವಣೆಗಳಿಲ್ಲದೆ ವಂಚಿತರಿಗೆ ನ್ಯಾಯ ಒದಗಿಸುವುದು ಸಾಧ್ಯವಿಲ್ಲ. ಇದು ಗ್ರಾಮ ಪಂಚಾಯತಿ ಮಟ್ಟದಲ್ಲಿ ಹಿಂದುಳಿದವರಿಗೆ, ಪರಿಶಿಷ್ಟರಿಗೆ ಮತ್ತು ಮಹಿಳೆಯರಿಗೆ ನೀಡಿರುವ ಮೀಸಲಾತಿಯಿಂದ ಸ್ಪಷ್ಟವಾಗುತ್ತದೆ. ಯರೆಹಂಚನಾಳ ಗ್ರಾಮಪಂಚಾಯಿತಿಯ ಉಪಾಧ್ಯಕ್ಷರ ಸ್ಥಿತಿ ಇದಕ್ಕೆ ಪುರಾವೆಯಾಗಿದೆ. ಕೃಷ್ಣನಗರ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಪರಿಶಿಷ್ಟರಲ್ಲಿ ಪದವಿ ಪೂರ್ವ ಮತ್ತು ಮುಂದೆ ಓದಿದವರು ಯಾರೂ ಇಲ್ಲದಿರುವ ಸ್ಥಿತಿಯಿಂದ ಖಚಿತವಾಗುತ್ತದೆ. ಕೃಷ್ಣನಗರ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಅನಕ್ಷರಸ್ಥರ ಸಂಖ್ಯೆಯು ಅಕ್ಷರಸ್ಥರ ಸಂಖ್ಯೆಗಿಂತ ೨.೭ಪಟ್ಟು ಅಧಿಕವಾಗಿದೆ. ನಮ್ಮ ಪ್ರತಿಪಾದನೆಯೇನೆಂದರೆ ಅನಕ್ಷರತೆ ನಿವಾರಣೆ ಅಭಿವೃದ್ಧಿಯ ಆದ್ಯತೆಯಾಗಬೇಕು.

**ಅಭಿವೃದ್ಧಿಯ ನಿಯೋಗಿಗಳು**

ಅಮರ್ತ್ಯಸೇನ್ ತಮ್ಮ ಅಧ್ಯಯನಗಳಲ್ಲಿ ಮತ್ತೆ ಮತ್ತೆ ಜನರನ್ನು ಅಭಿವೃದ್ಧಿಯ ಸಾಧನವಾಗಿ ಮತ್ತು ಸಾಧ್ಯವೂ ಆಗಿ ನೋಡುವ ಕ್ರಮದ ಬಗ್ಗೆ ಹೇಳುತ್ತಾ ಬಂದಿದ್ದಾರೆ. ಜನರು ಅಭಿವೃದ್ಧಿಯ ನಿಯೋಗಿಗಳಾದಾಗ ಮಾತ್ರ ಅದರಲ್ಲಿ ಅವರಿಗೆ ಪಾಲು ದೊರೆಯುತ್ತದೆ. ಸದ್ಯ ಅವರು ಕೇವಲ ಫಲಾನುಭವಿಗಳಾಗಿದ್ದಾರೆ. ಅವರು ಕೇವಲ ಬಿಕ್ಷಾ-ಜೋಳಿಗೆಯಾಗಿದ್ದಾರೆ.

ಅಭಿವೃದ್ಧಿ-ವಿಕೇಂದ್ರೀಕರಣ-ಸಬಲೀಕರಣ ಮುಂತಾದವುಗಳನ್ನು ಹೀಗೆ ಪೇಶೆಂಟ್ಸ್ ನೆಲೆಯಿಂದ ಪರಿಭಾವಿಸಿ ಕೊಂಡಿರುವುದರಿಂದ ಜನರು ಅಭಿವೃದ್ಧಿಯ ನಿಯೋಗಿಗಳಾಗುವುದು ಸಾಧ್ಯವಿಲ್ಲ. ಈ ಸಂಗತಿಗಳೆಲ್ಲ ಸಂಘರ್ಷ- ಸಂಘಟನೆಯಿಲ್ಲದೆ ಬಡವರಿಗೆ ನ್ಯಾಯ ಒದಗಿಸುವುದು ಅಸಾಧ್ಯ. ಅಭಿವೃದ್ಧಿಯನ್ನು ಪ್ರದೇಶ ನಿರ್ದಿಷ್ಟವಾಗಿ ನೋಡುವ ಜೊತೆಗೆ ಸಾಮಾಜಿಕ ವರ್ಗ-ಗುಂಪುಗಳ ನೆಲೆಯಿಂದಲೂ ನೋಡುವ ಅಗತ್ಯವಿದೆ.

ಅನುಸಂಧಾನತ್ವವು ಪ್ರಜಾಪ್ರಭುತ್ವದ ಒಂದು ಸಾರಸತ್ವಗುಣವಾಗಿದೆ. ಆದರೆ ನಮ್ಮ ಗ್ರಾಮೀಣ ಪ್ರದೇಶದಲ್ಲಿ ಅನುಸಂಧಾನತ್ವಕ್ಕೆ ಸಂಬಂಧಿಸಿದಂತೆ ಭೂಮಾಲಿಕರು-ಭೂರಹಿತ ಕೂಲಿಕಾರರು, ಉನ್ನತ ಜಾತಿ-ಕೆಳಜಾತಿ, ಗಂಡ- ಹೆಂಡತಿ, ಗಂಡು-ಹೆಣ್ಣು ಮುಂತಾದ

ನೆಲೆಯಲ್ಲಿ ಅಸಮಾನತೆಯಿದೆ. ಯಾರು ಯಾರ ಮುಂದೆ ಹೇಗೆ ಮಾತನಾಡಬೇಕು, ಯಾವ ವಿಷಯ ಮಾತನಾಡಬೇಕು, ಯಾರು ಯಾವ ಸ್ಥಳಗಳಿಗೆ ಪ್ರವೇಶಿಸಬೇಕು, ಪ್ರವೇಶಿಸ ಬಾರದು ಮುಂತಾದ ನಿಷೇಧಗಳು ಜೀವಂತವಾಗಿರುವ ಗ್ರಾಮಾಂತರ ಪ್ರದೇಶದಲ್ಲಿ ಅಭಿವೃದ್ಧಿಯು ಪ್ರಜಾಪ್ರಭುತ್ವ ನಿಯಮಗಳಿಗೆ ಅನುಗುಣವಾಗಿ ಸಂಭವಿಸಲು ಸಾಧ್ಯವಿಲ್ಲ. ಕುಡಿಯುವ ನೀರಿನ ಸಂಗ್ರಹದಂತಹ ಸಂಗತಿ ಬಗ್ಗೆ ಬಿ.ಆರ್.ಅಂಬೇಡ್ಕರ್ ನಡೆಸಿದ ಮಹಾಡ್ ಕೆರೆ ಹೋರಾಟ ಚರಿತ್ರೆಗೆ ಸೇರಿ ಹೋದ ಸಂಗತಿಯಾಗಿಲ್ಲ. ಅದು ಇನ್ನೂ ಜೀವಂತವಾಗಿರುವ ಸಂಗತಿ ನಮ್ಮೆದುರಿಗಿವೆ. ನೀರಿನ ಸಂಗ್ರಹವನ್ನು ನಿಯಂತ್ರಿಸುತ್ತಿರುವ ಸಾಂಸ್ಕೃತಿಕ ಸಂಗತಿಗಳು ಅಭಿವೃದ್ಧಿಯನ್ನು ನಿಯಂತ್ರಿಸದಿರುತ್ತವೆಯೇ!

ಆದ್ದರಿಂದ ಇಂದು ನಮ್ಮ ನೀತಿ-ಕಾರ್ಯಕ್ರಮಗಳ ಗುರಿ ಜೀನ್ ಡ್ರೀಡ್ ಹೇಳುವ ಬೇಸ್‌ಲೈನ್ ಅಸಮಾನತೆಯನ್ನು ನಿವಾರಿಸುವುದಾಗಬೇಕು. ಈ ನೀತಿಯು ಜನ್ ಬ್ರೆಮನ್ ಹೇಳುವ ಆರೋಹಣವಾದಿ ಅಸಮಾನತೆಗಳನ್ನು ನಿವಾರಿಸುವ ದಿಕ್ಕಿನಲ್ಲಿ ಕ್ರಿಯಾಶೀಲ ವಾಗಬೇಕು. ಜೀನ್ ಡ್ರೀಜ್-ಅಮರ್ತ್ಯಸೇನ್ ಹೇಳುವ ಅನೂಚಾನವಾಗಿ ಹರಿದುಕೊಂಡು ಬಂದಿರುವ ಅಸಮಾನತೆಗಳನ್ನು ಹೋಗಲಾಡಿಸುವುದು ಮುಖ್ಯವಾಗಬೇಕು. ಡಾ.ಬಿ.ಆರ್. ಅಂಬೇಡ್ಕರ್ ಹೇಳಿದ ವೈರುಧ್ಯಗಳನ್ನು ತೊಡೆದು ಹಾಕುವ ಪ್ರಯತ್ನ ನಡೆಯಬೇಕು.

ಪ್ರಸ್ತುತ ಅಧ್ಯಯನವು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಅಭಿವೃದ್ಧಿ ವಿಕೇಂದ್ರೀಕರಣ ಹೇಗೆ ಸಂಭವಿಸುತ್ತಿವೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ನಡೆಸಿದ ಪ್ರಯತ್ನವಾಗಿದೆ. ಆದ್ದರಿಂದ ಇಲ್ಲಿ ಶಿಫಾರಸ್ಸುಗಳಿಲ್ಲ. ನೀತಿ-ನಿರ್ಣಯಗಳಿಗೆ ಸಂಬಂಧಿಸಿದಂತೆ ಮಾರ್ಗ ಸೂಚಿಯಿಲ್ಲ. ಇಲ್ಲಿ ಕೆಲವು ಸಂಗತಿಗಳನ್ನು ಸ್ಥೂಲವಾಗಿ ಗುರುತಿಸಲಾಗಿದೆ. ಈ ಅಧ್ಯಯನದಲ್ಲಿ ಎತ್ತಿರುವ ಪ್ರಮೇಯವನ್ನು ಸಾಧಿಸಬೇಕಾದರೆ ಇನ್ನು ಹೆಚ್ಚು ಅಧಿಕೃತವಾದ ಎಂಫೆರಿಕಲ್ ಮಾಹಿತಿ-ಎವಿಡೆನ್ಸ್ ಬೇಕಾಗುತ್ತದೆ. ಈ ದಿಶೆಯಲ್ಲಿ ನಮಗೆ ಮುಂದೆ ಸಾಗಲು ಇಲ್ಲಿಯವರೆಗಿನ ಅಧ್ಯಯನ ಗಟ್ಟಿಯಾದ ಬುನಾದಿ ಒದಗಿಸುತ್ತದೆ ಎಂದು ಭಾವಿಸಲಾಗಿದೆ.

◆◆

## ಆಕರಸೂಚಿ


Ambedkar B.R., 2002, 'Outside the Fold', is Valarian Rodrigus(Ed), **The Essential Writings of B.R.Ambedkar**, Oxford University Press, New Delhi, Pp.323-331

Aziz, Abdul, 1996, 'Power to People: The Karnataka Experiment' in Abdul Aziz and David D.Arnold(Ed) **Decentralized Governance in Asian Countries**, Sage Publications, New Delhi.

——— 2000, 'Democratic Decentralization: Experience of Karnataka', **Economic and Political Weekly**, Vol.35, No.39, Sep 23, Pp.3521-3526

Batliwala, Srilatha, 1994, 'The Meaning of Women's Empowerment: New Concept from Action' in Gita Sen and others(ed) **Population policies Reconsidered: Health, Empowerment and Rights**. Harvard Center for Population and Development Studies, Cambridge MA, Pp.127-138

——— and others 1998, **Status of Rural Women in Karnataka** (WPRAU). National Institute of Advanced Studies, Indian Institute of Science Campus. Bangalore.

Beteille, Andre, 1985, **Caste, Class and Power: Changing Patterns of Stratification in a Tanjore Village**, Oxford University Press, New Delhi (Chap II, Pp.19-44)

Breman, Jan, 1997, 'The Village in Focus' in Jan Breman et al(Ed) **The Village in Asian Revisited**, Oxford University Press, New Delhi, Pp.15-75

Dreze, Jean 1997, Palanpur:1957-1993, 'Occupation and Change: Land ownership and Social inequality' in Jan Breman et al (Ed) **The Village in Asia Revisited**, Pp.126-174

——— and Amartya Sen, 2002, **India: Development and Participation** (Decentralization and Local Democracy), Oxford University Press, New Delhi, Pp.358-362

Isaac Thomas with Richard W. Frank, 2000, **Local Democracy and Development: People's Campaign for Decentralized Planning in Kerala**, Left Word, New Delhi

Kothari Rajani, 1996, 'Issues in Decentralized Governance' in Abdul Aziz and David D. Arnold(Ed) **Decentralized Governance in Asian Countries,** Sage Publications, New Delhi, Pp.34-41

Kabeer Naila, 1996, **Reversed Realities: Gender Hierarchies in Development Thought,** Kali for Women, New Delhi

Nanjundappa D.M., 1999, **Decentralized Planning and Financing Rural Development in Karnataka, India.** State Planning Board. Government of Karnataka, Bangalore.

Mathew, George, 1994, **Panchayat Raj : From Legislation to Movement,** Concept Publishing Company, New Delhi

Mohammad Mohabbat Khan, 1996, 'Local self-government system in Rural Bangladesh' in Abdul Aziz and David D. Arnold(ed) **Decenralised Governance in Asian Countries,** Sage Publications, New Delhi, Pp.42-62

Sen, Amartya, 1990, 'Gender and Co-operative Conflicts' in Irene Tinker(ed) **Persistent Inequalities: Women and Development,** Oxford University Press, New Yark, Pp.123-149

Shivanna N., 2001, 'Decentralization and Rural Development: A Case of Karnataka' in Arun P.Bali(ed) **Refashioning the New Economic Order: Karnataka in Transition,** Rawat Publications, Jaipur

Singh, Katar, 1999, **Rural Development: Principles, Policies and Management,** Sage Publications New Delhi

UNDP, 2002, **Human Development Report 2002, Deepening Democracy in a Fragmented World,** Oxford University Press, New Delhi,

UNDP 1995, **Human Development Report,** 1995, Pp.67-69 and 74-75

Naryana Pradeep, 2003, 'Empowerment Through Participation: How Effective This Approach', **Economic and Political Weekly,** June 21, 2003, Pp.2484-2486

Wilhelm Dilthey, 1990, 'The Human Science' in Jeffrey Alexander and Steven Seidman (Ed) **Culture and Society : Contemporary Debates,** Cambridge University Press, Cambridge, Pp.31-38

ಚಂದ್ರಶೇಖರ ಟಿ.ಆರ್., ೨೦೦೨, 'ವಿಕೇಂದ್ರೀಕರಣ ಹಾಗೂ ಅಭಿವೃದ್ಧಿ : ಕರ್ನಾಟಕದ ಅನುಭವಗಳು', **ಹೊಸತು** ವಿಶೇಷ ಸಂಚಿಕೆ ಪು.೧೯೦-೧೯೩

◆◆

ಕನ್ನಡವು ಕಾಗದರಹಿತ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತಿರುವಾಗಲೂ ಪುಸ್ತಕ ರೂಪದಲ್ಲಿ ಕನ್ನಡ ಕೃತಿಗಳ ಪ್ರಕಟಣೆ ಸಮಾನಾಂತರವಾಗಿ ಕ್ರಿಯಾಶೀಲವಾಗಿ ನಡೆಯುವುದು ಬಹಳ ಮುಖ್ಯವಾದದ್ದು. ತಾಂತ್ರಿಕ-ಮೌಖಿಕ ಮಾಧ್ಯಮದಲ್ಲಿ ಕನ್ನಡವು ಬಳಕೆಯಾಗುತ್ತಿರುವಾಗಲೇ ಕಾಗದದಲ್ಲಿ ಕನ್ನಡ ಅಕ್ಷರಗಳು ಮುದ್ರಣ ಗೊಂಡು ಕಣ್ಣಿಗೆ, ಕಿವಿಗೆ ಮತ್ತು ಮನಸ್ಸಿಗೆ ಕನ್ನಡ ಸಂವಹನ ಗೊಳಿಸುವ ಪ್ರಕ್ರಿಯೆ ನಿರಂತರವಾಗಿ ನಡೆಯಬೇಕಿದೆ. ಇಲ್ಲಿ ಪ್ರಕಟಗೊಳ್ಳುವ ಮಾಧ್ಯಮ ದೊಂದಿಗೆ ಅಭಿವ್ಯಕ್ತಗೊಳ್ಳುವ ಚಿಂತನಾ ಶರೀರವೂ ಮುಖ್ಯ ವಾದದ್ದು. ಭಾಷೆ, ಸಾಹಿತ್ಯ, ಕಲೆಗಳು, ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ ಎನ್ನುವ ಬೌದ್ಧಿಕ ಗಡಿರೇಖೆಗಳನ್ನು ಕಳಚಿಕೊಂಡು ಕನ್ನಡ ಜ್ಞಾನವು ಕನ್ನಡ ವಿಶ್ವವಿದ್ಯಾಲಯದಲ್ಲಿ ರೂಪು ಗೊಳ್ಳುವ ಮತ್ತು ಪ್ರಕಟಗೊಳ್ಳುವ ಪ್ರಕ್ರಿಯೆ ನಡೆಯುತ್ತಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಇಂಥ ಪ್ರಕ್ರಿಯೆಯ ಅನಂತ ರೂಪಗಳನ್ನು ಸಾಕಾರಗೊಳಿಸುವ ಒಂದು ನವರಂಗ. ಈ ಪ್ರಕಟಣೆಗಳು ಚಿಂತನೆ ಮತ್ತು ಪ್ರಯೋಗಗಳ ಫಲಗಳಾಗಿರುವುದರ ಜೊತೆಗೆ ಕರ್ನಾಟಕವನ್ನು ಮತ್ತು ಕನ್ನಡ ಸಂಸ್ಕೃತಿಯನ್ನು ಇಪ್ಪತ್ತೊಂದನೇ ಶತಮಾನದುದ್ದಕ್ಕೂ ಮುನ್ನಡೆಸುವ ಬೆಳಕಿನ ಬೀಜಗಳಾಗಿವೆ. ಈ ಆಶಯದ ಹಿನ್ನೆಲೆಯಲ್ಲಿ ರೂಪುಗೊಂಡ ಪ್ರಸ್ತುತ ಕೃತಿ 'ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ : ರಾಜಕೀಯ ವೈಫಲ್ಯದ ಒಂದು ಸಂಕಥನ'. ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣಗಳನ್ನು ರಾಜಕೀಯ ವೈಫಲ್ಯದ ಸಂಕಥನವಾಗಿ ಪ್ರಸ್ತುತ ಅಧ್ಯಯನದಲ್ಲಿ ಪರಿಭಾವಿಸಿ ಕೊಳ್ಳಲಾಗಿದೆ. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿ ಹಾಗೂ ಪಡೆದ ಅನುಭವಗಳ ಆಧಾರದ ಮೇಲೆ ಇಲ್ಲಿನ ಅಧ್ಯಯನವನ್ನು ಕಟ್ಟಲಾಗಿದೆ. ಸೈದ್ಧಾಂತಿಕತೆ ಹಾಗೂ ಪ್ರಾಯೋಗಿಕತೆಗಳನ್ನು ಸಮನ್ವಯಗೊಳಿಸಿ ಇಲ್ಲಿನ ಪ್ರಮೇಯವನ್ನು ರೂಪಿಸಲಾಗಿದೆ. ಇಂತಹ ಕೃತಿಯನ್ನು ರಚಿಸಿಕೊಟ್ಟ ಡಾ.ಟಿ.ಆರ್.ಚಂದ್ರಶೇಖರ ಅವರಿಗೆ ನಮ್ಮ ಅಭಿನಂದನೆಗಳು.

ಬಿ.ಎ. ವಿವೇಕ ರೈ
ಕುಲಪತಿ